ಸಂಚಿಕೆ 2 । ಸಂಪುಟ 3 । ಏಪ್ರಿಲ್ 2023

# ಕುತೂಹಲಿ

## ಕೊನೆಯಿಲ್ಲದ ಕಲ್ಪನೆ ಎಣೆಯಿಲ್ಲದ ಬೆರಗು

**ವೈಜ್ಞಾನಿಕ ಕಥೆ ವಿಶೇಷಾಂಕ**

**ವಿಚಾರ ಮಂಥನ**

ಬಾಲ ಫೋಂಡ್ಕೆ,
ದೇವೇಂದ್ರ ಮೇವಾಡಿ,
ಶಾಂತಲಾ ಆರ್.

**ಕಥೆ**

ಬಾಲ ಫೋಂಡ್ಕೆ,
ದೇವೇಂದ್ರ ಮೇವಾಡಿ,
ಸಪ್ನಾ ಕಟ್ಟಿ






**Editor-in-Chief**
Nakul Parashar

**Advisors**
Prof. S. Ayyappan
Dr. T. V. Venkateswaran

**Editing & Production**
Kollegala Sharma (A.S.K.V.S.Sharma)

**Cover Design & Layout**
Kumar S

**Address for Correspondence**
Kutuhali, C/o Karnataka Science & Technology Academy,
Prof UR Rao Science Centre,
Major Sandip Unnikrishnan Road
Horticultural Sciences College Campus
Near Doddabettahalli Extension Bus Stop
Vidyaranyapura PO, Yalahanka
Bengaluru-560097, Karnataka

**Telephone**
91-9886640328 | 91-080-2972550

**Email**
kutuhalikannada@gmail.com
ksta.gok@gmail.com

**Website**
www.kstacademy.in/kn/kutuhali
















# ವೈಜ್ಞಾನಿಕ ಕಥೆಗಳ ಕೌತುಕಮಯ ಲೋಕ



## ನಿರ್ದೇಶಕರ ಮನದಿಂದ

ನಕುಲ್ ಪರಾಶರ

ನಮ್ಮಲ್ಲಿ ಬಹಳಷ್ಟು ಜನ ಸ್ಟಾರ್ ಟ್ರೆಕ್ ಎನ್ನುವ ಟೀವಿ ಧಾರಾವಾಹಿಯನ್ನು ನೋಡುತ್ತ ಬೆಳೆದವರು. ಅದರಲ್ಲಿ ಬರುವ ಯುಎಸ್‌ಎಸ್ ಎಂಟರ್‌ಪ್ರೈಸ್, ಕ್ಯಾಪ್ಟನ್ ಜೇಮ್ಸ್ ಕಿರ್ಕ್, ಕಮ್ಯಾಂಡರ್ ಸ್ಪಾಕ್, ಉಹುರಾ, ಮ್ಯಾಕ್‌ಕಾಯ್ ಮೊದಲಾದ ಪಾತ್ರಗಳ ಹೆಸರುಗಳು ಈಗಲೂ ಕಿವಿಯಲ್ಲಿ ರಿಂಗಣಿಸುತ್ತಿವೆ. 1966ರಲ್ಲಿ ಮೊದಲು ತಯಾರಾದ ಈ ಧಾರಾವಾಹಿ, ಅಂದಿನಿಂದ ಇಂದಿನವರೆಗೆ ಇನ್ನೂ ಹನ್ನೊಂದು ಕಥೆಗಳಿಗೆ ಜನ್ಮ ನೀಡಿದೆ. ಇವುಗಳಲ್ಲಿ ಇತ್ತೀಚಿನದ್ದು ಎಂದರೆ ಕಳೆದ ವರ್ಷ ತೆರೆ ಕಂಡ ಸ್ಟಾರ್ ಟ್ರೆಕ್: ವಿಚಿತ್ರ ಹೊಸ ಲೋಕಗಳು ಎನ್ನುವ ಹೆಸರಿನ ಧಾರಾವಾಹಿ. ಸ್ವಾರಸ್ಯಕರ ವಿಷಯವೆಂದರೆ ಸ್ಟಾರ್ ಟ್ರೆಕ್ ಟೀವಿ ಲೋಕದಲ್ಲಿಯೇ ಅತ್ಯಧಿಕ ಗಳಿಕೆಯನ್ನು ಗಳಿಸಿದ ಧಾರಾವಾಹಿಗಳಲ್ಲಿ ಒಂದು ಎನಿಸಿಕೊಂಡಿದೆ. ಅದರ ಜೊತೆ, ಜೊತೆಗೇ ಅದೇ ವಿಷಯದ ಮೇಲೆ ಹಲವು ಚಲನಚಿತ್ರಗಳು, ಇತರೆ ಟೀವಿ ಧಾರಾವಾಹಿಗಳು, ವೀಡಿಯೋ ಆಟಗಳು, ಕಾದಂಬರಿಗಳು ಹಾಗೂ ಕಾಮಿಕ್ಸ್ ಪುಸ್ತಕಗಳೂ ತಯಾರಾದುವು. ಇವೆಲ್ಲದರ ಫಲವಾಗಿ ಹಲವಾರು ಜನಪ್ರಿಯ ವೈಜ್ಞಾನಿಕ ಚಲನಚಿತ್ರಗಳೂ, ಸ್ಟಾರ್ ವಾರ್ಸ್, ಸ್ಪೇಸ್ ಒಡೆಸೀ, ಪ್ಲಾನೆಟ್ ಆಫ್ ಏಪ್ಸ್ ನಂತಹ ಇನ್ನೂ ಹಲವು ವೈಜ್ಞಾನಿಕ ಕಥೆಗಳು ಜಾಗತಿಕವಾಗಿ ಜನಪ್ರಿಯವಾದವು. ಇವೆಲ್ಲವೂ ನಾವು ವೈಜ್ಞಾನಿಕ ಕಥೆಗಳೆಂದು ಕರೆಯುವ ಸಾಹಿತ್ಯದ ಕೂಸುಗಳು. ವೈಜ್ಞಾನಿಕ ಕಥೆ ಎನ್ನುವುದು ವಿಜ್ಞಾನ ಮತ್ತು ತಂತ್ರಜ್ಞಾನದ ಜೊತೆಗೆ ತಳುಕಿಕೊಂಡಿರುವ ಕಾಲ್ಪನಿಕ, ಊಹಾತ್ಮಕವಾದ ಲೋಕಗಳ ವೃತ್ತಾಂತವಷ್ಟೆ. ಇವುಗಳಲ್ಲಿ ಬಹುತೇಕ ಭವಿಷ್ಯತ್ತಿನವು, ಇಲ್ಲವೇ ಇಂದಿನವು. ಅಚ್ಚರಿಯ ವಿಷಯವೇನೆಂದರೆ ಜಗತ್ತಿನ ಯಾವ ಮೂಲೆಯ ವೈಜ್ಞಾನಿಕ ಕಥೆಯೇ ಆಗಿದ್ದರೂ ಅದರಲ್ಲಿ ಅತ್ಯುನ್ನತ ವಿಜ್ಞಾನ ಮತ್ತು ತಂತ್ರಜ್ಞಾನ, ಅನ್ಯಲೋಕಜೀವಿಗಳು, ಕಾಲಯಾನ ಹಾಗೂ ಯುದ್ಧಗಳೇ ಪ್ರಮುಖ ಪಾತ್ರಧಾರಿಗಳಾಗಿರುತ್ತವೆ. ಭಾರತದಲ್ಲಿಯೂ ಕೂಡ ಶತಶತಮಾನಗಳಿಂದ ರೋಚಕ ಕಥೆಗಳು ಜನರನ್ನು ರಂಜಿಸಿವೆ. ರಸಾಯನವನ್ನು ಹಚ್ಚಿ ಜೀವಿಗಳನ್ನು ಮಾರ್ಪಡಿಸುವ ಕಥೆಗಳು, ವಿಮಾನಗಳನ್ನು ಬಳಸಿ ಯುದ್ಧ, ಆಳ ಸಮುದ್ರದಲ್ಲಿಂದ ಹೆಕ್ಕಿದ ಮುತ್ತುಗಳೇ ಮೊದಲಾದ ಕಥಾನಕಗಳು ನಮ್ಮ ವೈಜ್ಞಾನಿಕ ಕಥೆಗಳಲ್ಲಿಯೂ ತುಂಬಿಕೊಂಡಿವೆ. ಪ್ರಪಂಚದೆಲ್ಲೆಡೆ, ವಿಜ್ಞಾನ ಹಾಗೂ ತಂತ್ರಜ್ಞಾನಗಳಂತೆಯೇ, ವೈಜ್ಞಾನಿಕ ಕಥೆಗಳನ್ನೂ ಜಾಗತಿಕವೆಂದು ಎಲ್ಲರೂ ಒಪ್ಪುತ್ತಾರೆ.

ವೈಜ್ಞಾನಿಕ ಕಥೆಗಳು ಪ್ರಮುಖವಾಗಿ ನಮ್ಮ ಇಂದಿನ ಹಾಗೂ ಶೀಘ್ರದಲ್ಲೇ ಘಟಿಸುವ ನಾಳೆಗಳ ಬಗ್ಗೆ ಕಥೆ ಹೇಳುತ್ತವಷ್ಟೆ. ಅಂದ ಹಾಗೆ 2047ರಲ್ಲೇನಾಗಬಹುದು ಎನ್ನುವುದನ್ನು ಕಲ್ಪಿಸಿಕೊಳ್ಳುವುದು ಇಂದಿಗೆ ಪ್ರಸ್ತುತ. ಆಗ ಭಾರತ ಸ್ವಾತಂತ್ರ್ಯ ಪಡೆದು ಶತಮಾನ ಕಳೆದಿರುತ್ತದೆ. 2047 ಭವಿಷ್ಯದ ಕಾಲವೆನ್ನುವುದು ಸತ್ಯ. ಆದ್ದರಿಂದಲೇ ಅದು ವೈಜ್ಞಾನಿಕ ಕಥೆಗೂ ಒಳ್ಳೆಯ ಹೂರಣ. ವಾಸ್ತವವಾಗಿ, ಅಂತಹದ್ದೊಂದು ಕಥೆ ಆಗ ನಮ್ಮ ದೇಶದ ಸ್ಥಿತಿ–ಗತಿ ಹೇಗಿರಬಹುದು ಎನ್ನುವುದನ್ನು ಸೂಚಿಸುತ್ತದಷ್ಟೆ. ಇಂದಿನಿಂದ 2047ನೇ ಇಸವಿಯ ಅವಧಿಯವರೆಗಿನ ಕಾಲವನ್ನು ಅಮೃತಕಾಲ ಎಂದು

13ನೇ ಪುಟ ನೋಡಿ ➤



## ವೈಜ್ಞಾನಿಕ ಕಥೆಗಳು

# ಕೊನೆಯಿಲ್ಲದ ಕಲ್ಪನೆ ಎಣೆಯಿಲ್ಲದ ಬೆರಗು

ಡಾ. ಟಿ. ವಿ. ವೆಂಕಟೇಶ್ವರನ್

ಒಂದೊಮ್ಮೆ ಸಾಮಾಜಿಕ ಅವಶ್ಯಕತೆಗಳನ್ನು ಕಲ್ಪಿಸಿಕೊಳ್ಳುತ್ತಿದ್ದ ವೈಜ್ಞಾನಿಕ ಕಥೆಗಳು ಇಂದು ಅದರಲ್ಲಿ ಸೋತಿವೆಯೇ?





ಯಾವುದೇ ಪುಸ್ತಕದ ಅಂಗಡಿಯೊಳಗೆ ಕಾಲಿಟ್ಟರೆನ್ನಿ. ಅಲ್ಲೊಂದು ವೈಜ್ಞಾನಿಕ ಕಥೆ ಎನ್ನುವ ವಿಭಾಗವಿರುತ್ತದೆ. ಬಣ್ಣ, ಬಣ್ಣದ ಮುಖಪುಟದಲ್ಲಿ ಚಿತ್ರವಿಚಿತ್ರವಾದ ಆಕಾಶನೌಕೆಗಳು ಅಗಾಧವಾದ ಆಕಾಶದಲ್ಲಿ ತೇಲುವುದರ ಜೊತೆಯಲ್ಲಿ ವಿಚಿತ್ರ ರೂಪಗಳ ಅನ್ಯಗ್ರಹಜೀವಿಗಳು ಅಥವಾ ವಿಲಕ್ಷಣವಾದ ಉಡುಗೆ ಧರಿಸಿದ ಗಂಡು–ಹೆಣ್ಣುಗಳು ಭವಿಷ್ಯದ ನಗರಗಳಲ್ಲಿರುವುದನ್ನು ಕಾಣುವಿರಿ. ಪುಟಗಳನ್ನು ಹೊರಳಿಸಿದರೆ, ಅದರ ಸ್ವರೂಪ ಸ್ಪಷ್ಟವಾಗುತ್ತದೆ. ಅನ್ಯಗ್ರಹ ಪ್ರವಾಸ, ಭೂಮಿಯೇತರ ಜೀವಿಗಳ ಜೊತೆಗೆ ಯುದ್ಧ, ಯುಟೋಪಿಯಾದಂತಹ ಸ್ವರ್ಗ ಸಮಾನವಾದ ಸಮಾಜದ ಕಲ್ಪನೆಗಳು, ಭವಿಷ್ಯತ್ತಿನ ಅನ್ವೇಷಣೆ ಅಥವಾ ನಾಳೆಗೋ, ನಿನ್ನೆಗೋ ಕಾಲಯಾನದ ಕಥಾನಕಗಳಿರುತ್ತವೆ.

ಈ ವೈಜ್ಞಾನಿಕ ಕಥೆಯೆನ್ನುವದೇನು? ಪ್ರೇಮಕಥೆಯೇ? ಹಾಗೂ ಇರಬಹುದು. ಬೈಸೆಂಟೆನ್ನಿಯಲ್ ಮ್ಯಾನ್ ನಲ್ಲಿರುವಂತೆ ಹೆಣ್ಣು ಮತ್ತು ಯಂತ್ರವೊಂದರ ನಡುವಿನ ಉತ್ಕಟ ಪ್ರೇಮವೂ ಇಲ್ಲಿ ಸಾಧ್ಯ. ಅಥವಾ ಭಯಾನಕವೋ, ನಾಟಕೀಯವೋ, ಹಾಸ್ಯವೋ, ಸಾಹಸ ಕಥೆಯೋ? ಅಥವಾ ಸ್ಟಾರ್ ವಾರ್‌ನಂತೆ ಧಾರಾವಾಹಿಯೂ ಇರಬಹುದು. ಪ್ರತಿ ವೈಜ್ಞಾನಿಕ ಕಥೆಯನ್ನೂ ಈ ಯಾವುದಾದರೂ ಪ್ರಕಾರವೆಂದು ವರ್ಗೀಕರಿಸಬಹುದು. ಆದರೆ, ಉಳಿದ ಸಾಹಿತ್ಯಗಳಿಂದ ಇದನ್ನು ಬೇರ್ಪಡಿಸುವ ಒಂದು ಸ್ವರೂಪವೆಂದರೆ, ಇಡೀ ಕಥೆಯ ಕೇಂದ್ರವೇ ಬೆರಗು ಅಥವಾ ಅಚ್ಚರಿಯಾಗಿರುತ್ತದೆ. ಈ ಅಚ್ಚರಿಗೆ ಶನಿಗ್ರಹದ ಸುತ್ತಲೂ ಇರುವ ಬಳೆಗಳಂತಹ ಅಥವಾ ಕರೀಬಿಲದಂತಹ ನೈಸರ್ಗಿಕ ವಸ್ತು ಕಾರಣವಿರಬಹುದು. ಅಥವಾ ಸ್ಪೇಸ್ ಸ್ಟೇಶನ್ನೋ, ರಾಕೆಟ್ ನೌಕೆಯಂತಹುದೋ ತಾಂತ್ರಿಕ ಶೋಧವೂ ಕಾರಣವಾಗಿರಬಹುದು.

ಒಟ್ಟಾರೆ ಈ ಕಥಾಪ್ರಕಾರದ ಕೇಂದ್ರಬಿಂದು ನಮ್ಮದಂತಲ್ಲದ ಲೋಕವೊಂದನ್ನು ಕಟ್ಟುವುದು. ಅದು ಗ್ರಹವಿರಬಹುದು, ಇಲ್ಲವೇ ಇನ್ನೊಂದು ವಿಶ್ವವೇ ಇರಬಹುದು. ಅಥವಾ ಸ್ಥಿತಿಗತಿಗಳು ಬೇರೆಯೇ ಇರುವಂತಹ ನಾಳಿನ ಲೋಕವಿರಬಹುದು. ಅಲ್ಲಿ ಅನ್ಯಗ್ರಹ ಜೀವಿಗಳು ಆಕ್ರಮಣವೋ, ಮಂಗಳಗ್ರಹದಲ್ಲಿ ಮನೆ ಕಟ್ಟುವುದೋ, ವೃದ್ಧಾಪ್ಯಕ್ಕೆ ಶಾಶ್ವತ ಮದ್ದೋ ಇರುವಂತಹ ನಾಳಿನ ಲೋಕ. ಹೀಗೆ ವೈಜ್ಞಾನಿಕ ಕಥೆಗಳ ಕೇಂದ್ರ ಬಿಂದುವಾದ "ಹೀಗಿದ್ದರೆ ಹೇಗೆ?" ಎನ್ನುವ ಪ್ರಶ್ನೆ ಓದುಗರನ್ನು ಮಾನವನ ಇತಿಮಿತಿಗಳತ್ತ ಓದುಗ ಗಮನ ಹರಿಸುವಂತೆ ಮಾಡುತ್ತದೆ. ಹೀಗಾಗಿ ವೈಜ್ಞಾನಿಕ ಕಥೆಗಳು ಸಾಮಾಜಿಕ ಬದಲಾವಣೆಗಳನ್ನು ಊಹಿಸುವ ಶಕ್ತಿಯುತ ಸಾಧನವೂ ಹೌದು. ವೈಜ್ಞಾನಿಕ ಕಥೆಗಳಲ್ಲಿ ಕಲ್ಪನೆಯೇ ಹೀರೋ.

ಹೀಗೆಂದ ಕೂಡಲೇ ಪುಷ್ಪಕ ವಿಮಾನಗಳಂತಹ ಕಲ್ಪನೆಗಳಿರುವ ರಾಮಾಯಣದಂತಹ ಪುರಾಣಗಳನ್ನೂ ವೈಜ್ಞಾನಿಕ ಕಥೆ ಎನ್ನಬಹುದಲ್ಲ ಎನಿಸಬಹುದು. ಆದರೆ ಡಾರ್ಕೊ ಸುವೀನರಂತಹ ವಿದ್ವಾಂಸರು, ವೈಜ್ಞಾನಿಕ ಕಥೆಗಳು ಕೋಪರ್ನಿಕಸನ ಕ್ರಾಂತಿಕಾರಕ ಶೋಧಗಳ ಆರಂಭವಾಗಿದ್ದು ಎಂದು ಪ್ರತಿಪಾದಿಸಿದ್ದಾರೆ. ಪೌರಾಣಿಕ ಕಲ್ಪನೆಗಳನ್ನು ಪ್ರಶ್ನಿಸುವ ಮೂಲಕ ಅಂದಿನ ಕಾಲದಲ್ಲಿ ಅಧಿಕಾರದ ಮೂಲವಾಗಿದ್ದ ಚರ್ಚುಗಳ ಅಧಿಕಾರವನ್ನು ಕೋಪರ್ನಿಕಸ್ ವಿರೋಧಿಸಿದ್ದ. ಅದುವರೆವಿಗೂ ದೈವನಿಯಾಮಕವಾದದ್ದು ಎನಿಸಿದ್ದ ಸಾಮಾಜಿಕ ಹಾಗೂ ರಾಜಕೀಯ ವ್ಯವಸ್ಥೆಗಳು ಕುಸಿದು ಬಿದ್ದದ್ದು, ಇಂದಿರುವ ವ್ಯವಸ್ಥೆಗಿಂತಲೂ ಸಂಪೂರ್ಣವಾಗಿ ಭಿನ್ನವಾಗಿರುವಂತಹ ನಾಳಿನ ಸಾಮಾಜಿಕ ವ್ಯವಸ್ಥೆಗಳನ್ನು ಕಲ್ಪಿಸಿಕೊಳ್ಳಲು ಅವಕಾಶಗಳನ್ನು ಒದಗಿಸಿತು. ಈ ನಿಟ್ಟಿನಲ್ಲಿ ಥಾಮಸ್ ಮೋರ್ ಬರೆದ ಯುಟೋಪಿಯಾ (1516) ಸ್ಮರಣಾರ್ಹ. ಈ ವೈಜ್ಞಾನಿಕ ಕಥೆಯಲ್ಲಿ ನಾಯಕನೊಬ್ಬ ದೂರದೊಂದು ದ್ವೀಪಕ್ಕೆ ಭೇಟಿ ನೀಡುತ್ತಾನೆ. ಅಲ್ಲಿನ ಸಮಾಜ ಅಂದಿನ ಯುರೋಪಿನ ಸಮಾಜಕ್ಕಿಂತಲೂ ಹೆಚ್ಚು ವ್ಯವಸ್ಥಿತವಾಗಿ ಸಂಘಟಿತವಾಗಿರುವುದನ್ನು, ಉತ್ತಮವಾಗಿರುವುದನ್ನು ನೋಡುತ್ತಾನೆ.

ವೈಜ್ಞಾನಿಕ ಕಥೆಗಳಲ್ಲಿ ಕಲ್ಪನೆಗಳು ತುಂಬಿದ್ದರೂ, ಅದು ಪೂರ್ಣ ಕಾಲ್ಪನಿಕ ಕಥೆಯಲ್ಲ. ಪುರಾಣಗಳು ಅಥವಾ ಕಿನ್ನರ ಲೋಕದ ಕಥೆಗಳು ಒಂದಾನೊಂದು ಕಾಲದಲ್ಲಿ ಅಥವಾ 'ಸಪ್ತಸಾಗರವೋ, ಸಪ್ತಲೋಕಗಳಾಚೆಗೋ' ನಡೆಯುವಂತಹ ಕಾಲ್ಪನಿಕ ಕಥೆಗಳು. ಆದರೆ ವೈಜ್ಞಾನಿಕ ಕಥೆಗಳು ಭವಿಷ್ಯ ನುಡಿಯುವಂಥವು. ಹಾಗೆಂದ ಮಾತ್ರಕ್ಕೆ ಎಲ್ಲ ವೈಜ್ಞಾನಿಕ ಕಥೆಗಳೂ ಭವಿಷ್ಯದಲ್ಲಿಯೇ ಘಟಿಸುತ್ತವೆಂದಲ್ಲ. ಇವು ಕೇವಲ ಅವಾಸ್ತವಿಕವೆನ್ನಿಸುವ ಸಾಹಿತ್ಯ ಎಂದಷ್ಟೆ. ಈಗಿರುವಂಥದ್ದರ ಕಥೆಯಲ್ಲ. ಹೇಗಿದ್ದಿರಬಹುದು ಎನ್ನುವಂತಹ ಕಥಾನಕ. ಅದು ನಾಳೆಯದಿರಬಹುದು, ಅಥವಾ ಬೇರೊಂದು ಕಾಲದ್ದೋ, ಇಂದೇ ಇನ್ನೊಂದು ಲೋಕದಲ್ಲಿಯೋ, ಅಥವಾ ಮತ್ತೊಂದು ಸಮಾಂತರ ಆಯಾಮದಲ್ಲಿಯೋ ಆಗುವಂತಹ ಕಥೆ.



**ವೈಜ್ಞಾನಿಕ ಕಥೆಗಳು ಕೋಪರ್ನಿಕಸನ ಕ್ರಾಂತಿಕಾರಕ ಶೋಧಗಳ ಪ್ರಭಾವದಿಂದಾಗಿ ಪೌರಾಣಿಕ ಕಲ್ಪನೆಗಳನ್ನು ಪ್ರಶ್ನಿಸುವ ಮೂಲಕ ಅಂದಿನ ಕಾಲದಲ್ಲಿ ಅಧಿಕಾರದ ಮೂಲವಾಗಿದ್ದ ಚರ್ಚುಗಳ ಅಧಿಕಾರವನ್ನು ಕೋಪರ್ನಿಕಸ್ ವಿರೋಧಿಸಿದ್ದ.**

ವೈಜ್ಞಾನಿಕ ಕಥೆಗಳ ಪ್ರಕಾರಕ್ಕೆ ಗೆಲಿಲಿಯೋನ ನಂತರ ನಡೆದ ವೈಜ್ಞಾನಿಕ ಶೋಧಗಳೇ ಆಧಾರ. ಇದು ವಿಶ್ವವನ್ನು ಮಾಯಾಲೋಕವೆನ್ನುವಂತೆ ಬೆರಗುಗಣ್ಣಿನಿಂದ ನೋಡುವುದಲ್ಲ. ಹೊಸತೊಂದು, ಮಾಯೆಯಲ್ಲದ ವಾಸ್ತವಿಕ ವಿಶ್ವದ ಕಥಾನಕ. ತಟಕ್ಕನೆ ಇಡೀ ಬ್ರಹ್ಮಾಂಡವೇ ವಿಶಾಲವಾಗಿ ಕಾಣುತ್ತದೆ. ಅದುವರೆಗೂ ಗೊತ್ತೇ ಇರದ, ಯಾರೂ ಊಹಿಸದಂತಹ ಗುರುಗ್ರಹದ ಚಂದ್ರನಂತಹ ವಸ್ತುಗಳು ಪತ್ತೆಯಾಗುತ್ತವೆ. ಕಾಲ ಎನ್ನುವುದನ್ನು ಬೇರೆ ರೀತಿಯಲ್ಲಿಯೂ ವಿವರಿಸುವುದು ಸಾಧ್ಯವಾಗುತ್ತದೆ. ಈಗ ಬೆರಗು ಮೂಡಿಸುವುದಕ್ಕೆ ಮಾಂತ್ರಿಕತೆ ಬೇಕೇ ಇಲ್ಲ. ವಿಜ್ಞಾನ ಹಾಗೂ ಅದರಿಂದ ಉದ್ಭವಿಸಿದ ತಾಂತ್ರಿಕ ಸಾಧ್ಯತೆಗಳೇ ಅಚ್ಚರಿಯನ್ನು ಮೂಡಿಸಬಲ್ಲುವಾಗಿದ್ದುವು. ನಯನ ಮನೋಹರವಾಗಿದ್ದುವು. ಅದ್ಭುತ ಕಥೆಗಳು ಮಾಯಾಜಾಲದಿಂದ ಅವಾಸ್ತವಿಕ ಲೋಕವನ್ನು ಹುಟ್ಟು ಹಾಕಿದರೆ, ನಿಜವಾದ ವೈಜ್ಞಾನಿಕ ಕಥೆಗಳು ವಿಜ್ಞಾನ ಹಾಗೂ ತಂತ್ರಜ್ಞಾನಗಳ ಸಾಧ್ಯತೆಗಳನ್ನೂ ಊಹಿಸುವ, ತರ್ಕಿಸುವ ಮೂಲಕ ಇದನ್ನು ಸಾಧಿಸುತ್ತವೆ. ಇದೇ ಕಾರಣಕ್ಕಾಗಿಯೇ ಸುಪ್ರಸಿದ್ಧ ವೈಜ್ಞಾನಿಕ ಕಥೆಗಾರ ಜೂಲ್ಸ್ ವರ್ನೆ, ದಿ ಫಸ್ಟ್ ಮ್ಯಾನ್ ಆನ್ ದಿ ಮೂನ್ (1901) ಹೆಸರಿನ ಹೆಚ್ ಜಿ ವೆಲ್ಸನ ಕಾದಂಬರಿಯನ್ನು ಹೀಗಳೆದಿದ್ದ. ಅದರಲ್ಲಿ ಚಂದ್ರನತ್ತ ರಾಕೆಟನ್ನು ಚಿಮ್ಮಲು ಗುರುತ್ವವಿರೋಧಿ ಕೇವೊರೈಟ್ ಎನ್ನುವ ಅಪ್ಪಟ ಮಾಯೆಯಂತೆ ತೋರುವ ಕಾಲ್ಪನಿಕ ವಸ್ತುವನ್ನು ಬಳಸಲಾಗಿತ್ತು.

ವೈಜ್ಞಾನಿಕ ಕಥೆಗಳಲ್ಲಿ ಎರಡು ಪ್ರಮುಖ ತೊರೆಗಳನ್ನು ಕಾಣಬಹುದು. ಅಪ್ಪಟ ವೈಜ್ಞಾನಿಕ ಕಥೆ, ಊಹಾತ್ಮಕವಾದದ್ದು ಹಾಗೂ ಇನ್ನೊಂದು ಅದ್ಭುತ ಕಥೆಗಳು. ಜೂಲ್ಸ್ ವರ್ನೆಯ ಕಥೆಗಳು ಉದಾಹರಣೆಯಾಗಿರುವ

ಮೊದಲನೆಯ ವರ್ಗದವು ಕಥೆಗಳ ಮೂಲಕ ವಿಜ್ಞಾನವನ್ನು ಬೋಧಿಸಲು ಪ್ರಯತ್ನಿಸುತ್ತವೆ. ಹೆಚ್ ಜಿ ವೆಲ್ಸ್ ಬರೆದ ಅದ್ಭುತ ಕಥೆಗಳು ವಿಜ್ಞಾನದ ನೆರವಿನಿಂದ ಕಥೆಗಾರಿಕೆಯನ್ನು ಬೆಳೆಸಿದುವು. ಜೂಲ್ಸ್ ವರ್ನೆಯೋ ತನ್ನ ಕಥೆಗಳಲ್ಲಿ ಓದುಗರನ್ನು ಬೇರೆಯದೇ ತಾಣಗಳಿಗೆ ಕೊಂಡೊಯ್ಯುತ್ತಿದ್ದ. ಉದಾಹರಣೆಗೆ, ಭೂಮಿಯ ಗರ್ಭಕ್ಕೆ, ಚಂದ್ರನ ಮೇಲೆ, ಉತ್ತರ ಧ್ರುವ ಹಾಗೂ ದೂರದ ಗ್ರಹಗಳಿಗೆ. ಅದೇ ವೆಲ್ಸ್ ಓದುಗರನ್ನು ಕಾಲಯಾನಕ್ಕೆ, ಭೂತ ಇಲ್ಲವೇ ಭವಿಷ್ಯದ ಲೋಕಕ್ಕೆ, ಕೊಂಡೊಯ್ದಿದ್ದ.

ಹತ್ತೊಂಭತ್ತನೆಯ ಶತಮಾನದ ವೈಜ್ಞಾನಿಕ ಕಥೆಗಳು ಅಂದಿನ ಮಧ್ಯಮವರ್ಗಗಳ ಆತಂಕಗಳ ಪ್ರತಿನಿಧಿಗಳಾಗಿದ್ದುವು. ಆಲ್ಬರ್ಟ್ ರೋಬಿಡಾನ ಕೃತಿ ದಿ ಟ್ವೆಂಟಿಯತ್ ಸೆಂಚುರಿಯನ್ನೇ ಗಮನಿಸಿ. 1883ರಲ್ಲಿ ರಚನೆಯಾದ ಈ ಕೃತಿಯ ನಾಯಕಿ ಒಬ್ಬ ಯುವತಿ. ಈಕೆ 1952ರಲ್ಲಿ ಪ್ಯಾರಿಸಿನಲ್ಲಿ ಉದ್ಯೋಗವನ್ನು ಹುಡುಕುತ್ತಿದ್ದಾಳೆ. ಸ್ವರ್ಗಸಮಾನವಾದ ಪ್ಯಾರಿಸ್ ಲೇಖಕನ ಕಲ್ಪನೆಯಲ್ಲಿ ಜನರನ್ನು ಕೊಂಡೊಯ್ಯುವ ಹಾರುವ ಟ್ಯಾಕ್ಸಿಗಳಿಂದ ತುಂಬಿತ್ತು. ಪ್ರತಿಯೊಂದು ಮನೆಯಲ್ಲಿಯೂ ಒಂದು ಟೆಲಿಫೋಟೋಸ್ಕೋಪ್ ಇತ್ತು – ಸುದ್ದಿ ಮತ್ತು ಮನರಂಜನೆಯನ್ನು ಬಿತ್ತರಿಸಲು. ಅಲ್ಲಿನ ಸರಕಾರವನ್ನು ಪ್ರತಿ ಹತ್ತು ವರ್ಷಕ್ಕೊಮ್ಮೆ ವ್ಯವಸ್ಥಿತವಾಗಿ ನಡೆಯುತ್ತಿದ್ದ ಕ್ರಾಂತಿಯಲ್ಲಿ ಪದಚ್ಯುತಿಗೊಳಿಸಲಾಗುತ್ತಿತ್ತು. ಕಾದಂಬರಿಯಲ್ಲಿ ತಂತ್ರಜ್ಞಾನ, ಸಮೂಹ ಸಾಗಣೆಯ ವ್ಯವಸ್ಥೆಗಳನ್ನಷ್ಟೆ ಅಲ್ಲದೆ ಮಹಿಳೆಯರ ಉದ್ಯೋಗವೇ ಮೊದಲಾದ ಸ್ತ್ರೀ ಸಮಸ್ಯೆಗಳು ಹಾಗೂ ಚುನಾಯಿತ ಪ್ರಜಾತಂತ್ರದಂತಹ ವಿಷಯಗಳ ಬಗ್ಗೆಯೂ ಕಲ್ಪನೆಗಳಿದ್ದುವು.

ಇದಕ್ಕೆ ವ್ಯತಿರಿಕ್ತವಾದದ್ದು ಮೇರಿ ಶೆಲ್ಲಿಯ ಫ್ರಾಂಕೆನ್‌ಸ್ಟೈನ್ (1818). ಇದು ಅಲ್ಲಿನ ಮೇಲ್ವರ್ಗದವರ ಭಯವನ್ನು ಬಿಂಬಿಸಿದ ವೈಜ್ಞಾನಿಕ ಕಥೆ. ಬಂಡವಾಳಶಾಹಿಯ ಕ್ಷಿಪ್ರ ಬೆಳವಣಿಗೆಯಿಂದ ಇಂಗ್ಲೆಂಡಿನ ಸಾಮಾಜಿಕ ವ್ಯವಸ್ಥೆಯಲ್ಲಾಗುತ್ತಿದ್ದ ಬದಲಾವಣೆಗಳಿಗೆ ಹೊಂದಿಕೊಳ್ಳಲಾಗದ ಮೇಲ್ವರ್ಗದವರ ಆತಂಕದ ಕನ್ನಡಿಯಾಗಿತ್ತು. ಭಯದ ಮೂಲವನ್ನು ಅತೀಂದ್ರಿಯದಿಂದ ವೈಜ್ಞಾನಿಕದ ಕಡೆಗೆ ಕೊಂಡೊಯ್ದ ಅದು, ವಿಜ್ಞಾನಿಯೊಬ್ಬ ಹೀರೋ, ತಂತ್ರಜ್ಞಾನವೆನ್ನುವುದು ಒಳಿತನ್ನೇ ಮಾಡುತ್ತದೆ ಎನ್ನುವ ಜನಸಾಮಾನ್ಯರ ಮುಗ್ಧ ವಿಶ್ವಾಸವನ್ನು ತಿರಸ್ಕರಿಸಿದ ಕಥೆ. ತಾಂತ್ರಿಕ ಅಭಿವೃದ್ಧಿಯ ತಿರಸ್ಕಾರವೂ ಹೌದು. ಕಥಾನಾಯಕನೊಬ್ಬ ಹುಚ್ಚ ವಿಜ್ಞಾನಿ. ಜ್ಞಾನ ಹಾಗೂ ಅಧಿಕಾರದ ಮೋಹದ ಬೆನ್ನು ಹತ್ತಿದ ಆತ ಮೂಲಭೂತ ಮಾನವ ಮೌಲ್ಯಗಳನ್ನು ಮರೆಯುತ್ತಾನೆ. ಇದು ಮುಂದಿನ ಭವಿಷ್ಯದ ಕಥೆ ಎನಿಸಿತು.

ವಿಶೇಷವೆಂದರೆ ಅತ್ತ ಇಂಗ್ಲೆಂಡಿನಲ್ಲಿ ಹೆಚ್ ಜಿ ವೆಲ್ಸ್ ವೈಜ್ಞಾನಿಕ ಕಥೆಗಳನ್ನು ಬರೆಯಲಾರಂಭಿಸಿದ ಸಮಯದಲ್ಲಿಯೇ ಇಲ್ಲಿ ಭಾರತದಲ್ಲಿಯೂ ಪಶ್ಚಿಮ ಬಂಗಾಳದಲ್ಲಿ ವೈಜ್ಞಾನಿಕ ಕಥೆಗಳು ಹುಟ್ಟಿದವು. ಕಲ್ಕತ್ತಾ ಲಿಟರರಿ ರಿವ್ಯೂ ಗೆಜೆಟ್ ಪತ್ರಿಕೆಯಲ್ಲಿ 1835ರಲ್ಲಿ ಕೆ.ಸಿ. ದತ್ತ ಪ್ರಕಟಿಸಿದ "ಎ ಜರ್ನಲ್ ಆಫ್ ಫಾರ್ಟಿ ಎಯ್ಟ್ ಅವರ್ಸ್ ಇನ್ 1945" ಎನ್ನುವ ಕಥೆ ಇಂಗ್ಲೀಷಿನಲ್ಲಿ ಬರೆದ ಮೊತ್ತ ಮೊದಲ ಭಾರತೀಯ ವೈಜ್ಞಾನಿಕ ಕಥೆ. ಇದು ಕಾಲ್ಪನಿಕ ಚರಿತ್ರೆಯ ಕಾದಂಬರಿ. ಅದರಲ್ಲಿ ಲೇಖಕರು ಸುಮಾರು ನೂರು ವರುಷಗಳಷ್ಟು ಮುಂದೆ ಭವಿಷ್ಯದಲ್ಲಿ ಭಾರತೀಯರು ಒಬ್ಬ ಪ್ರಭಾವಶಾಲಿ ವ್ಯಕ್ತಿಯ ನೇತೃತ್ವದಲ್ಲಿ ಸ್ವಾತಂತ್ರ್ಯಕ್ಕಾಗಿ ಬ್ರಿಟಿಷರ ವಿರುದ್ಧ ಯುದ್ಧ ಮಾಡುವ ಕಥೆ ಇದೆ. ಹಾಗೆಯೇ 1845ರಲ್ಲಿ ಪ್ರಕಟವಾದ ಸೋಶೀ ಚುಂದರರ "ದಿ ರಿಪಬ್ಲಿಕ್ ಆಫ್ ಒರಿಸ್ಸಾ: ಎ ಪೇಜ್ ಫ್ರಂ ದಿ ಆನಲ್ಸ್ ಆಫ್ ಟ್ವೆಂಟಿಯತ್ ಸೆಂಚುರಿ" 1916ರಲ್ಲಿ ಬ್ರಿಟಿಷ್ ಸಾಮ್ರಾಜ್ಯದಿಂದ ಒರಿಸ್ಸಾದ ಜನ ಸ್ವತಂತ್ರವಾದರೆನ್ನುವ ಕಥೆಯನ್ನು ಹೇಳುತ್ತದೆ. ಇದು ಮತ್ತು ರೊಕೆಯಾ ಸಖಾವತ್ ಹೊಸೇನ್ ಬರೆದ ಸುಲ್ತಾನಾಸ್ ಡ್ರೀಮ್ (1905) ಭಾರತೀಯರು ಇಂಗ್ಲೀಷಿನಲ್ಲಿ ಪ್ರಕಟಿಸಿದ ಮೊದ ಮೊದಲ ವೈಜ್ಞಾನಿಕ ಕಥೆಗಳು. ದಿ ಇಂಡಿಯನ್ ಲೇಡೀಸ್ ಮ್ಯಾಗಸೀನ್ ಪತ್ರಿಕೆಯಲ್ಲಿ ಪ್ರಕಟವಾದ *ಸುಲ್ತಾನಾಸ್ ಡ್ರೀಮ್: ಎ ಟೆರಿಬಲ್ ರಿವೆಂಜ್* (ಪುರುಷರ ವಿರುದ್ಧದ ಪ್ರತೀಕಾರ) ದಲ್ಲಿ ಅಂದಿನ ಮುಸ್ಲಿಂ ಸಮುದಾಯದಲ್ಲಿ ಮಹಿಳೆಯರ ಸ್ಥಾನವನ್ನು ಪುರುಷರದರಂತೆ ಬಿಂಬಿಸಿತ್ತು. ಶಿಕ್ಷಣದಿಂದ ಹೀಗೆ ಲಿಂಗಗಳ ಸ್ಥಾನಾಂತರಣ ಸಾಧ್ಯ ಎನ್ನುವ ಕನಸನ್ನು ಮೂಡಿಸಿತ್ತು. ತಮಿಳಿನಲ್ಲಿ ಮೊತ್ತ ಮೊದಲೆನ್ನಬಹುದಾದ ವೈಜ್ಞಾನಿಕ ಕಥೆ, ಸುಪ್ರಸಿದ್ಧ ಕಥೆಗಾರರಾದ ಜೆ. ಆರ್ ರಂಕರಾಜುರವರ "ಅತಿಥಿ" ಹಾಗೂ ತೆಲುಗುವಿನಲ್ಲಿ ಟೇಕುಮಲ್ಲ ರಾಜ್ ಗೋಪಾಲ ರಾವ್ ಬರೆದ *ವಿಹಂಗ ಯಾನಮು* ಕೂಡ ಹೀಗೆ ತಂತ್ರಜ್ಞಾನದ ಸುಧಾರಣೆಯಿಂದ ಮಹಿಳೆಯರ ಅಭಿವೃದ್ಧಿಯನ್ನು, ಸ್ವಾತಂತ್ರ್ಯವನ್ನು ಕಲ್ಪಿಸಿಕೊಂಡಿದ್ದುವು.

ಮೇಲಿನೆರಡು ಇಂಗ್ಲೀಷ್ ಕೃತಿಗಳು ಬಂಗಾಳದ ಭದ್ರಲೋಕದ ಸಾಕ್ಷರರನ್ನು ತಲುಪಿದೆ, ಅದೇ ಸುಮಾರಿನಲ್ಲಿ ಬೆಂಗಾಲಿ ಭಾಷೆಯಲ್ಲಿಯೇ ಬರೆದ



ಜಗದಾನಂದ ರಾಯ್ ಅವರ 1879ರ ಕೃತಿ *ಶುಕ್ರಭ್ರಮಣ* (ಶುಕ್ರಪ್ರವಾಸ), 1882ರಲ್ಲಿ ವಿಜ್ಞಾನ ದರ್ಪಣ ಎನ್ನುವ ಬೆಂಗಾಳಿ ಸಚಿತ್ರ ವಿಜ್ಞಾನ ಪತ್ರಿಕೆಯಲ್ಲಿ ಎರಡು ಕಂತುಗಳಲ್ಲಿ ಪ್ರಕಟವಾದ ಹೇಮಲಾಲ್ ದತ್ತಾರ *ರಹಸ್ಯ*, ಪ್ರೇಮೇಂದ್ರ ಮಿತ್ರಾ ಅವರ ಪಿಪ್ರೇ ಪುರಾಣ (ಇರುವೆ ಪುರಾಣ) ಹಾಗೂ *ಮಂಗಲಬಾರಿ* (ಮಂಗಲ ವೈರಿಗಳು) ಅಂದಿನ ಸ್ಥಳೀಯ ಸಾಕ್ಷರರನ್ನು ರಂಜಿಸಿದ್ದುವು. ಇವುಗಳಲ್ಲಿ ಲೇಖಕರು ವೈಜ್ಞಾನಿಕ ಕಥೆಗಳ ಮೂಲಕ ಮಾನವ ಸಮಾಜದಲ್ಲಿರುವ ಒಡಕು, ಬಿರುಕುಗಳನ್ನು ವಿಮರ್ಶಿಸುತ್ತಾ, ನಾಳಿನ ಸವಾಲುಗಳನ್ನು ಎದುರಿಸಲು ಇಡೀ ಮಾನವತೆ ಒಗ್ಗೂಡಬೇಕೆಂದು ಸೂಚಿಸಿದ್ದರು.

ಹತ್ತೊಂಭತ್ತನೆಯ ಶತಮಾನದ ಅಂತ್ಯದಲ್ಲಿ ಪ್ರಭಾವಿ ವಿಜ್ಞಾನಿಯಾಗಿದ್ದ, ಹಾಗೂ ಮಾರ್ಕೋನಿಯ ಜೊತೆಗೆ ರೇಡಿಯೋವನ್ನು ಆವಿಷ್ಕರಿಸಿದ ಎಂದು ಇಂದು ಮಾನ್ಯತೆ ಪಡೆದಿರುವ, ಜಗದೀಶ ಚಂದ್ರ ಬೋಸರು ಕೂಡ *ಪಲಾಟಕ್ ತೂಫಾನ್* (ಕಾಣೆಯಾದ ಸುಂಟರಗಾಳಿ) ಎನ್ನುವ ವೈಜ್ಞಾನಿಕ ಕಥೆಯನ್ನು ಬರೆದಿದ್ದರು. 1896ರಲ್ಲಿ ಪ್ರಕಟವಾದ ಈ ಕಥೆಯಲ್ಲಿ ಸುಂಟರಗಾಳಿಯಿಂದ ಹುಚ್ಚೆದ್ದ ಸಮುದ್ರವನ್ನು ಒಂದು ಪುಟ್ಟ ಬಾಟಲಿ ಕೇಶತೈಲದಿಂದ ಮಣಿಸಿದ ಸ್ವಾರಸ್ಯಕರ ಸಾಹಸದ ವೃತ್ತಾಂತವಿದೆ.

ತಮಿಳಿನ ಸುಪ್ರಸಿದ್ಧ ರಾಷ್ಟ್ರಕವಿ ಸಿ. ಸುಬ್ರಮಣ್ಯ ಭಾರತಿ ಕೂಡ *ಕಾಕ್ಕೈ ಪಾರ್ಲಿಮೆಂಟ್* ಎನ್ನುವ (ಕಾಗೆಗಳ ಕೂಟ), ವೈಜ್ಞಾನಿಕ ಕಥೆಗಳ ಹಲವಾರು ಗುಣಗಳಿರುವ ಕಥೆಯನ್ನು ಬರೆದಿದ್ದರು. ಸ್ವಗತದಂತೆ ಬರೆದಿದ್ದ ಇದರಲ್ಲಿ ಭಾರತಿಯವರು ಕಾಗೆಗಳ ಭಾಷೆಯನ್ನು ಕಲಿಯುತ್ತಾರೆ. ಕಾಗೆಗಳ ಕೂಟದ ಚಟುವಟಿಕೆಯನ್ನು ಕದ್ದು ಕೇಳುವುದು ಉದ್ದೇಶ. ಆಗಷ್ಟೆ ರಾಜನ ವಿರುದ್ಧ ದಂಗೆಯೆದ್ದು ಅವನನ್ನು ಕಿತ್ತೊಗೆದಿದ್ದ ದೇಶವಾದ ರಶಿಯಾ ದೇಶದಿಂದ ಮರಳಿದ್ದ ರಾಜಕಾಗೆಯ ಸುತ್ತಲೂ ಕಥೆಯನ್ನು ಹೆಣೆದಿದ್ದರು. ಅದರಲ್ಲಿ ರಶ್ಯಾದ ಕ್ರಾಂತಿ ಹಾಗೂ ಪ್ರಸಕ್ತ ಸಮಾಜದಲ್ಲಿನ ಅಸಮಾನತೆಗಳನ್ನು ಚರ್ಚಿಸಲಾಗಿತ್ತು. *ಜ್ಞಾನರಥಂ* (ಜಾಣರಥ) ಎನ್ನುವ ಇನ್ನೊಂದು ಕಥೆಯಲ್ಲಿ ಭಾರತಿಯಾರ್ ಬೇರೆ ಲೋಕಗಳಿಗೆ ಪ್ರವಾಸ ಹೋಗುತ್ತಾರೆ. ಈ ಪ್ರವಾಸ ಅನ್ಯ ಗ್ರಹಗಳು ಅಥವಾ ಗೆಲಾಕ್ಸಿಗಳಲ್ಲಿರುವ ಲೋಕಗಳಿಗಲ್ಲ. ಆದರೆ ಹಿಂದೂ ಪುರಾಣಗಳಲ್ಲಿ ಕಲ್ಪಿಸಿದ್ದ ಗಂಧರ್ವಲೋಕ, ಸತ್ಯಲೋಕ ಮುಂತಾದವುಗಳಿಗೆ. “ಗಂಧರ್ವಲೋಕದ ಕೆಲವು ನಡವಳಿಕೆಗಳು ಇಂದಿನ ಆಚಾರಧರ್ಮಕ್ಕೆ ವಿರುದ್ಧವೆನಿಸಿದರೆ ಅದು ನನ್ನ ತಪ್ಪಲ್ಲ ಆದರೆ ಸುಖಿಸುವುದನ್ನು ಪಾಪವೆಂದೂ, ಕಷ್ಟದಿಂದ ಪುಣ್ಯವೊದಗುತ್ತದೆಂದೂ ಪ್ರವಚನ ಮಾಡುವವರನ್ನು ಕಂಡು ನಗು ಬಂದಿತು,” ಎಂದು ಹೇಳುವ ಭಾರತಿಯಾರ್, ಗಂಧರ್ವಲೋಕದಲ್ಲಿನ ಅಪ್ಸರೆಯೊಬ್ಬಳು ಕೊಟ್ಟ ಚುಂಬನವನ್ನು ವಿವರಿಸುವುದಲ್ಲದೆ, ಅಲ್ಲಿ ನಗ್ನತೆಯನ್ನೂ, ಸೌಂದರ್ಯವನ್ನೂ ಸಂಭ್ರಮಿಸುವುದನ್ನು ವಿವರಿಸಿದ್ದಾರೆ. ಶಾಂತಿಲೋಕದ ಹೆಬ್ಬಾಗಿಲಿನಲ್ಲಿ ಕಾವಲುಗಾರನೊಬ್ಬ ಜ್ಞಾನದ ಕತ್ತಿಯನ್ನು ಹಿಡಿದಿದ್ದನಂತೆ. ಒಬ್ಬ ಅತೀವ ಶ್ರೀಮಂತ ವ್ಯಕ್ತಿ ಸತ್ಯಲೋಕವನ್ನು ತಲುಪಿದಾಗ, ಅಲ್ಲಿನ ಸತ್ಯದ ಗಾಢ ಪ್ರಭಾವವನ್ನು ತಡೆಯಲಾರದೇ ಓಡಿ ಹೋದನೆನ್ನುತ್ತದೆ ಕಥೆ. ಹೀಗೆ ಭಾರತಿಯಾರ್ ಜ್ಞಾನರಥಂ ಕಥೆಯಲ್ಲಿ ಇತರೆ ಲೋಕಗಳಿಗೆ ಪಯಣಿಸುವ ಅಲಿಗರಿಯ ಮೂಲಕ ತಾನು ಕಲ್ಪಿಸಿದ ಯುಟೋಪಿಯಾವನ್ನು ತೆರೆದಿಡುವುದಲ್ಲದೆ, ಸ್ಥಳೀಯ ಸಂಪ್ರದಾಯಬದ್ಧ ಸಮಾಜದ ಓರೆಕೋರೆಗಳನ್ನು ವಿಮರ್ಶಿಸುತ್ತಾರೆ. ಭಾರತಿಯಾರ್ ಅವರ ಕೃತಿಗಳು ಕೇವಲ ಕಲ್ಪನೆಗಳೆಂದು ದೂರಬಹುದು. ಆದರೆ ಕಥೆಗಳಲ್ಲಿ ಎಲ್ಲಿಯೂ ಅತಿಮಾನವ ಶಕ್ತಿ ಇಲ್ಲವೇ ಮಾಂತ್ರಿಕತೆಯ ಬಳಕೆ ಕಾಣುವುದಿಲ್ಲ.



ಬ್ರಿಟಿಷರ ಭಾರತದಲ್ಲಿ ಹುಟ್ಟಿದ ಈ ವೈಜ್ಞಾನಿಕ ಕಥೆಗಳು ಬಹುಶಃ ಭಾರತೀಯ ಲೇಖಕರು ಇಂಗ್ಲೀಷು ಸಾಹಿತ್ಯದಿಂದ ಪಡೆದ ಪರಿಕಲ್ಪನೆಗಳಿಂದ ಹುಟ್ಟಿದವುಗಳಾಗಿರಬಹುದು. ಕಲ್ಪನೆಗಳು ಒಂದೇ ಆಗಿದ್ದರೂ, ಓದುಗರಿಗೆ ಮುಟ್ಟಿಸುವ ವಿಚಾರಗಳು ಯುರೋಪಿಯನ್ ಲೇಖಕರು ಹಾಗೂ ಭಾರತೀಯ ಲೇಖಕರದ್ದೂ ಒಂದೇ ಆಗಿದ್ದುವೋ? ಭಿನ್ನವಾಗಿದ್ದುವೋ? ಬ್ರಿಟಿಷ್ ಭಾರತದಲ್ಲಿ ಜನ್ಮತಳೆದ ಭಾರತೀಯ ವೈಜ್ಞಾನಿಕ ಕಥೆಗಳು ಅಂದಿನ ವಸಾಹತುಶಾಹಿ ಕಾಲದ ಸಂತಾನಗಳೇ ಆದರೂ, ಅವು ಕೇವಲ ಪರದೇಶಿ ಕಥೆಗಳಲ್ಲಿನ ಕಥಾನಕಗಳ ಎಳೆಗಳಂತೆಯೇ ಇವೆಯೇ? ಹಾಗಿದ್ದುವು ಎಂದಾದಲ್ಲಿ, ಭಾರತೀಯ ಲೇಖಕರು ತಮ್ಮ ಸಾಂಪ್ರದಾಯಿಕ ಜ್ಞಾನ ಪರಂಪರೆಯನ್ನೂ, ನವೀನ ವಿಜ್ಞಾನವನ್ನೂ ಒಟ್ಟಿಗೇ ಸರಿತೂಗಿಸಿದ್ದರೇ? ಇವರಿಬ್ಬರ ಯುಟೋಪಿಯಾಗಳೂ ಒಂದೇ ತೆರನವಾಗಿದ್ದುವೋ? ಇಂತಹ ಪ್ರಶ್ನೆಗಳಿಗೆ ಉತ್ತರ ಇನ್ನೂ ಹುಡುಕಬೇಕಿದೆ.

ವೈಜ್ಞಾನಿಕ ಕಥೆಗಳು ಪ್ರಮುಖವಾಗಿ ಮಾನವನೆಂಬ ಜೀವಿಯಲ್ಲಾಗುವ ಒಟ್ಟಾರೆ ಪರಿವರ್ತನೆಗಳನ್ನು ಕಲ್ಪಿಸುತ್ತವೆ ಎನ್ನಬಹುದು. ಈ ಪರಿವರ್ತನೆಗಳು ಹಲವೊಮ್ಮೆ ವೈಜ್ಞಾನಿಕ ಶೋಧಗಳಿಂದಾಗಿರಬಹುದು. ಅಥವಾ ಸಮಾಜದ ವಿಕಾಸಕ್ಕಾಗಿ ಮಾನವರು ಅನ್ವೇಷಿಸಿದ ವ್ಯವಸ್ಥೆಗಳಿಂದಾಗಿರಬಹುದು. ಹೀಗಾಗಿಯೇ ಎಡ್ವರ್ಡ್ ಬೆಲಾಮಿ, ವಿಲಿಯಂ ಮಾರಿಸ್, ಹೆಚ್ ಜಿ ವೆಲ್ಸ್, ಮತ್ತು ಜಾಕ್ ಲಂಡನ್ನರಂತಹ ಸಮಾಜ ಶಾಸ್ತ್ರಜ್ಞರು ಕೂಡ ವೈಜ್ಞಾನಿಕ ಕಥೆಗಾರರಾಗಿದ್ದರಲ್ಲಿ ಅಚ್ಚರಿ ಪಡಬೇಕಿಲ್ಲ. ಇಪ್ಪತ್ತನೆಯ ಶತಮಾನದ ಆರಂಭದಲ್ಲಿದ್ದ ಈ ಬರೆಹಗಾರರು ವೈಜ್ಞಾನಿಕ ಹಾಗೂ ಯುಟೋಪಿಯಗಳ ರಮಣೀಯತೆಗೂ, ವ್ಯಕ್ತಿ ಸ್ವಾತಂತ್ರ್ಯದಲ್ಲಿ ಅಡ್ಡಗಾಲಿಕ್ಕುವ ಬಂಡವಾಳಶಾಹಿ ನೀತಿಗಳನ್ನು ಕುರಿತ ಸಾಮಾಜಿಕ ಸುಧಾರಣೆಗಳೂ ಜೊತೆ, ಜೊತೆಗೂ ಸಾಗುತ್ತವೆಂದು ನಂಬಿದ್ದರು.

1960 ಮತ್ತು 1970 ರ ದಶಕದಲ್ಲಿನ ವೈಜ್ಞಾನಿಕ ಕಥೆಗಳು



ಯುಟೋಪಿಯನ್ ಪರಿವರ್ತನೆ ಎಂದು ಇಟಾಲೋ ಕ್ಯಾಲ್ವಿನೋ ಹೇಳಿದ ನೀತಿಗಳಿಂದ ಪ್ರಭಾವಿತವಾಗಿದ್ದುವು. ಪ್ರಪಂಚದ ಎಲ್ಲೆಡೆಯೂ ಇರುವ ಬಡತನ, ವರ್ಣಭೇಧ, ಲಿಂಗತಾರತಮ್ಯ ಹಾಗೂ ಲಿಂಗಶೋಷಣೆಗಳಿಂದ ಪ್ರಪಂಚವನ್ನು ಮುಕ್ತವಾಗಿಸುವ ಸಾಮರ್ಥ್ಯ ವಿಜ್ಞಾನಕ್ಕೆ ಎಲ್ಲೆಡೆಯೂ ಒಂದೇ ತೆರನಾಗಿದೆ ಎಂದು ನಂಬಿದ್ದುವು. ಸೋವಿಯತ್ ಲೇಖಕ ಇವಾನ್ ಯೆಫ್ರೆಮೋವನ ಸುಪ್ರಸಿದ್ಧ ಕಾದಂಬರಿ ಆಂಡ್ರೊಮೆಡಾ (1957) ವಿಜ್ಞಾನದಿಂದ ಆರಂಭಿಸಿ, ಕಲೆಯವರೆಗೆ ಸಮಾಜವಾದಿಗಳಿಗೆ ಪ್ರಿಯವಾದ ಎಲ್ಲ ಬಗೆಯ ವಿಷಯಗಳನ್ನೂ ಮುಟ್ಟಿತ್ತು. ಅದು ಹೀಗೆ ಪಾಶ್ಚಿಮಾತ್ಯ ವೈಜ್ಞಾನಿಕ ಕಥೆಗಳ ಜೊತೆಗೆ ಗೊತ್ತೇ ಆಗದ ಹಾಗೆ ವಾಗ್ವಾದಕ್ಕೆ ಇಳಿದಂತಿತ್ತು.

ಹಾಗೆಂದ ಮಾತ್ರಕ್ಕೆ ಇಂದಿನ ಎಲ್ಲ ವೈಜ್ಞಾನಿಕ ಕಥೆಗಳೂ ಸಮಾಜವಾದಿ ನೆಲೆಗಟ್ಟಿನಲ್ಲಿಯೇ ರೂಪುಗೊಂಡಿವೆ ಎನ್ನಲಾಗದು. ವಿಮರ್ಶಕರ ಪ್ರಕಾರ ಇತ್ತೀಚಿನ ಹಲವು ಜನಪ್ರಿಯ ವೈಜ್ಞಾನಿಕ ಕಥೆಗಳು, ವಿಶೇಷವಾಗಿ ಅಮೆರಿಕದಲ್ಲಿ ಪ್ರಕಟವಾದಂಥವು, ಅತ್ಯಂತ ಶಕ್ತಿಶಾಲಿ ಮಾರಕಾಸ್ತ್ರಗಳ ಬೆಳವಣಿಗೆಗೆ ಪ್ರೇರಣೆಯಾಗಿವೆ. *ಇಂಡಿಪೆಂಡೆನ್ಸ್ ಡೇ, ಆರ್ಮಗೆಡ್ಡಾನ್* ಮೊದಲಾದ ವೈಜ್ಞಾನಿಕ ಚಲನಚಿತ್ರಗಳು ಮೇಲ್ನೋಟಕ್ಕೆ ನಿರಪಾಯಕಾರಿ ಮನರಂಜನೆಯನ್ನು ನೀಡುತ್ತಿವೆ ಎನ್ನಿಸಿದರೂ, ಸೂಕ್ಷ್ಮವಾಗಿ ಅವಲೋಕಿಸಿದರೆ ಅವುಗಳಲ್ಲೊಂದು ಐಡಿಯಾಲಜಿ ಅಡಗಿರುವುದನ್ನು ಕಾಣಬಹುದು. ಈ ಚಲನಚಿತ್ರಗಳು ಪರಮಾಣು ಬಾಂಬುಗಳ ನಿಷೇಧವನ್ನು ಬೇಡುವ ಚಳುವಳಿಗಳು ಬಲಗೊಳ್ಳುತ್ತಿದ್ದ ಸಮಯದಲ್ಲಿ, ಆ ಶಸ್ತ್ರಗಳ ಬಳಕೆಗೆ ಸಮಜಾಯಿಷಿಯನ್ನು ನೀಡುತ್ತವೆ ಎಂದು ವಿದ್ವಾಂಸರು ದೂರಿದ್ದಾರೆ. ಜಾಗತಿಕ ವಾಯುಗುಣದಲ್ಲಿನ ಬದಲಾವಣೆಯನ್ನು, ಭೂಮಿ ಬಿಸಿಯೇರುತ್ತಿದೆ ಎನ್ನುವುದನ್ನು ಜನತೆ ಒಪ್ಪದಿರುವುದಕ್ಕೆ ಅಮೆರಿಕೆಯ ಜನಪ್ರಿಯ ವೈಜ್ಞಾನಿಕ ಕಥೆ, ಕಾದಂಬರಿಗಳ ಪ್ರಭಾವವೂ ತಿಳಿದ ವಿಷಯವೇ.

ಡಾನ್ ಕಹೋಟೆಯ ಕಥೆಯಲ್ಲಿ ಆತ ಗಾಳಿಯ ಗಿರಣಿಯ ಜೊತೆಗೆ ಹೋರಾಡುವುದು ಹಾಸ್ಯವೆಂದು ಎನ್ನಿಸುತ್ತದೆ. ಆದರೆ 1945ರ ನಂತರ, ಎರಡನೆಯ ವಿಶ್ವಯುದ್ಧದ ನಂತರ, ತಂತ್ರಜ್ಞಾನ ಎನ್ನುವುದು ಸರಳವೂ ಅಲ್ಲ. ಒಳ್ಳೆಯದೂ ಅಲ್ಲ ಎನ್ನುವುದು ಅರಿವಾದ ನಂತರ, ಮನುಷ್ಯ ಮತ್ತು ಯಂತ್ರಗಳ ನಡುವಣ ಸಂಬಂಧ ವೈಜ್ಞಾನಿಕ ಕಥೆಗಾರರ ಗಮನವನ್ನು ಸೆಳೆದಿದ್ದು ಸಹಜವೇ. ತಂತ್ರಜ್ಞಾನ ಮಾನವನ ಶ್ರಮವನ್ನು ಕಡಿಮೆ ಮಾಡುವ ಸಾಧನವೆನ್ನುವ ಸರಳ ವಿವರಣೆಯ ಬದಲಿಗೆ ಅದರ ಬಗ್ಗೆ ಅನುಮಾನ, ಅವಿಶ್ವಾಸಗಳು ಹುಟ್ಟಿಕೊಂಡಿವೆ. ಫ್ರೆಡೆರಿಕ್ ಬ್ರೌನನ ಆನ್ಸರ್ (ಉತ್ತರ) ಎನ್ನುವ ಕಥೆಯಲ್ಲಿ (1954) ಅತಿ ನೂತನವಾದ ಕಂಪ್ಯೂಟರನ್ನು "ದೇವರಿದ್ದಾನೆಯೇ?" ಎಂದು ಪ್ರಶ್ನಿಸಿದರೆ, ಅದು "ಹೌದು" ಎಂದು ಉತ್ತರಿಸಿ, ಕಂಪ್ಯೂಟರಿನ ಸ್ವಿಚ್ಚನ್ನು ಆರಿಸಲು ಸಿದ್ಧನಾದ ಮನುಷ್ಯನನ್ನು ಕೊಲ್ಲುತ್ತದೆ.

ಇತ್ತೀಚಿನ ವೈಜ್ಞಾನಿಕ ಕಥೆಗಳು ಸಾಂಪ್ರದಾಯಿಕತೆಯನ್ನು, ಅಧಿಕಾರಶಾಹಿಯನ್ನು ಹಾಗೂ ಎಲ್ಲವನ್ನೂ ವಾಣಿಜ್ಯದ ದೃಷ್ಟಿಯಿಂದ ನೋಡುವುದನ್ನು (ಕಮಾಡಿಫಿಕೇಶನ್) ಪ್ರಶ್ನಿಸುತ್ತಿವೆ. ಅವು ಪರಿಸರ ಸಂರಕ್ಷಣೆಯ ಚಳುವಳಿಗೆ ಒತ್ತು ಕೊಟ್ಟು, ಅನ್ಯರ ಬಗೆಗಿನ ದ್ವೇಷವನ್ನು ವಿರೋಧಿಸುತ್ತಾ, ವೈವಿಧ್ಯತೆ ಹಾಗೂ ಬಹು ಸಾಂಸ್ಕೃತಿಕ ಸಮಾಜಕ್ಕೆ ಒತ್ತು ನೀಡುತ್ತಿವೆ. ಇವು ಬಂಡವಾಳಶಾಹಿ ತನ್ನ ಕಬಂಧ ಬಾಹುಗಳನ್ನು ಎಲ್ಲೆಡೆ ಚಾಚುತ್ತಿರುವುದನ್ನೂ, ತಂತ್ರಜ್ಞಾನದ ಜೊತೆಗೆ ಅದಕ್ಕಿರುವ ದುರುದ್ದೇಶಪೂರಿತ ಸಂಬಂಧವನ್ನೂ, ಅವತಾರ್ ಕಥೆಯಲ್ಲಿರುವಂತೆ, ವಿಮರ್ಶಿಸುತ್ತವೆ. ಆದರೆ ಹಿಂದಿನಂತೆ, ಈ ಕೃತಿಗಳು ಕೂಡ ಗಹನವಾದ ರಾಜಕೀಯ ಪ್ರಶ್ನೆಗಳನ್ನು ಒಡ್ಡುವುದಾಗಲಿ, ಜಾಗತಿಕ ಬಂಡವಾಳಶಾಹಿಗೆ ಪರ್ಯಾಯ ವ್ಯವಸ್ಥೆಯನ್ನು ಸೂಚಿಸುವುದನ್ನಾಗಲಿ ಮಾಡುವುದಿಲ್ಲ. ಒಟ್ಟಾರೆ ವೈಜ್ಞಾನಿಕ ಕಥೆಗಳಿಗೀಗ ಸಂಕ್ರಮಣ ಕಾಲ. ಇಂದು ನಾವು ನಮಗೆ ಏನು ಬೇಡ ಎನ್ನುವುದರ ಬಗ್ಗೆ ಖಚಿತವಾಗಿದ್ದೇವಾದರೂ, ನಮಗೆ ಬೇಕಿರುವುದೇನು ಎಂಬುದನ್ನು ಸ್ಪಷ್ಟವಾಗಿ ಹೇಳಲು ಸೋತಿದ್ದೇವೆ ಎನ್ನಬಹುದು.

**ಡಾ. ಟಿ. ವಿ. ವೆಂಕಟೇಶ್ವರನ್ ವಿಜ್ಞಾನ ಪ್ರಸಾರ್, ನವದೆಹಲಿಯಲ್ಲಿ *ಸೈಂಟಿಸ್ಟ್‌–ಎಫ್* ಆಗಿದ್ದಾರೆ. ಅನುವಾದ: ಕೊಳ್ಳೇಗಾಲ ಶರ್ಮ**




ಕೊಳ್ಳೇಗಾಲ ಶರ್ಮ













# ಬಹುಮುಖ ಪ್ರತಿಭೆಯ ಕಥೆಗಾರ: ಬಾಳ ಫೋಂಡ್ಕೆ



**ಮ**ರಾಠಿ ಓದುಗರಿಗೆ ಬಾಳ ಫೋಂಡ್ಕೆ ಎಂದು ಚಿರಪರಿಚಿತರಾದ ಡಾ. ಗಜಾನನ ಪಿ. ಫೋಂಡ್ಕೆ ವೈಜ್ಞಾನಿಕ ಕಥೆಗಳು ಹಾಗೂ ವಿಜ್ಞಾನ ಸಾಹಿತ್ಯವೆರಡನ್ನೂ ಇಂಗ್ಲೀಷು ಹಾಗೂ ಮರಾಠಿಯಲ್ಲಿ ಬರೆದವರು. ಐದು ದಶಕಗಳಿಗೂ ಹೆಚ್ಚಿನ ಅನುಭವವಿರುವ ಬಾಳ ಫೋಂಡ್ಕೆಯವರು ವಿಜ್ಞಾನ ಸಂವಹನಕ್ಕೆ ನೀಡಿದ ಕೊಡುಗೆ ಅಪಾರ. ಬಹುಶಃ ಜನಪ್ರಿಯ ವಿಜ್ಞಾನ ಪತ್ರಿಕೆಗಳ ಸಂಪಾದಕರಲ್ಲಿ ಸಂಶೋಧನೆಯಲ್ಲಿ ವ್ಯಾಪಕ ಅನುಭವವಿರುವ ಏಕೈಕ ವ್ಯಕ್ತಿ. ವಿಜ್ಞಾನಿಯಾಗಿ, ಅದರಲ್ಲಿಯೂ ಸೈದ್ಧಾಂತಿಕ ಭೌತವಿಜ್ಞಾನದಲ್ಲಿ ವಿಜ್ಞಾನಿಯಾಗಿ ತಮ್ಮ ವೃತ್ತಿ ಜೀವನವನ್ನು ಆರಂಬಿಸಿದ ಬಾಳ ಫೋಂಡ್ಕೆ ಅನಂತರ ಎರಡು ದಶಕಗಳಿಗೂ ಹೆಚ್ಚು ಕಾಲ ಜೀವಿವಿಜ್ಞಾನದ ಅನ್ವೇಷಣೆಯಲ್ಲಿ ಕಳೆದರು. ಪ್ರಯೋಗಶಾಲೆಯನ್ನು ತೊರೆದು, ವಿಜ್ಞಾನ ಪತ್ರಿಕೆಗಳನ್ನು ಸಂಪಾದಿಸುವ ಪ್ರಯೋಗಕ್ಕೆ ಕೈ ಹಾಕಿದರು. 1980ರ ದಶಕದಲ್ಲಿ ಭಾರತದಲ್ಲಿ ಪ್ರಕಟವಾಗುತ್ತಿದ್ದ ಏಕೈಕ ಖಾಸಗಿ ಪ್ರಕಾಶನದ ವಿಜ್ಞಾನ ಪತ್ರಿಕೆ *ಸೈನ್ಸ್ ಟುಡೇ*ಯ ಸಂಪಾದಕರಾಗಿದ್ದರು. ಅನಂತರ ಸಿಎಸ್‌ಐಆರ್ ಪ್ರಕಟಿಸುತ್ತಿದ್ದ *ಸೈನ್ಸ್ ರಿಪೋರ್ಟರ್*‌ನ ಮುಖ್ಯ ಸಂಪಾದಕರಾಗಿ ಅದರ ಸ್ವರೂಪವನ್ನೇ ಬದಲಿಸಿದರು. ಈ ಪತ್ರಿಕೆ ಇಂದಿಗೂ ಅತಿ ಜನಪ್ರಿಯವಾಗಿ ಉಳಿದಿದೆ. ಅಷ್ಟೇ ಅಲ್ಲದೆ. ಸಿಎಸ್‌ಐಆರ್‌ನ *ಪಬ್ಲಿಕೇಶನ್ಸ್ ಅಂಡ್ ಇನ್‌ಫರ್ಮೇಶನ್ ಡೈರೆಕ್ಟೊರೇಟ್* (ಇಂದು ಇದು ರಾಷ್ಟ್ರೀಯ ವಿಜ್ಞಾನ ಸಂವಹನ ಹಾಗೂ ನೀತಿ ಸಂಶೋಧನೆಗಳ ಸಂಸ್ಥೆ, ನವದೆಹಲಿ ಎಂಬ ಹೆಸರು ಪಡೆದಿದೆ) ಹಾಗೂ ಪುಣೆಯಲ್ಲಿರುವ ಬೌದ್ಧಿಕ ಸಿರಿಯ ಸಂಶೋಧನೆ ಹಾಗೂ ಅಭಿವೃದ್ಧಿ ಘಟಕ (URDIP) ಎಂಬ ಎರಡು ಸಂಸ್ಥೆಗಳ ನಿರ್ದೇಶಕರಾಗಿ ಅವನ್ನು ಮುನ್ನಡೆಸಿದ್ದರು. ಇಂದು ತಮ್ಮ ಬದುಕು ಹಾಗೂ ವಿಜ್ಞಾನ ಸಂವಹನದ ಕುರಿತು ಬಾಳ ಫೋಂಡ್ಕೆ ಮಾತನಾಡಿದ್ದಾರೆ..



**ಕೊಳ್ಳೇಗಾಲ ಶರ್ಮ:** *ನಮಸ್ಕಾರ. ನೀವು ಮುಂಬಯಿಯ ಭಾಭಾ ಪರಮಾಣು ಸಂಶೋಧನಾ ಕೇಂದ್ರದಂತಹ ಪ್ರತಿಷ್ಠಿತ ಸಂಶೋಧನಾಲಯದಲ್ಲಿ ವಿಜ್ಞಾನಿಯಾಗಿದ್ದವರು., ಅನಂತರ ಜನಪ್ರಿಯ ವಿಜ್ಞಾನ ಪತ್ರಿಕೆಯ ಸಂಪಾದಕರಾದಿರಿ. ಬೇರೆಯದೇ ವೃತ್ತಿಗೆ ಇಳಿದಿರಿ. ಈ ಪಲ್ಲಟವಾಗಿದ್ದು ಹೇಗೆ? ಕಾರಣವೇನು?*



**ಬಾಳ ಫೋಂಡ್ಕೆ:** " ನಿಜ ಹೇಳಬೇಕೆಂದರೆ, ನೀವು ಈಗ ಹೇಳಿದ ಪಲ್ಲಟವಷ್ಟೆ ಅಲ್ಲ. ನನ್ನ ಬದುಕಿನಲ್ಲಿ ಇನ್ನೂ ಹಲವು ಇಂತಹ ಬದಲಾವಣೆಗಳನ್ನು ಕಂಡಿದ್ದೇನೆ. ಉದಾಹರಣೆಗೆ, ನಾನು ಸ್ನಾತಕೋತ್ತರ ಪದವಿಯನ್ನು ಪಡೆದಿದ್ದು ಥಿಯರೆಟಿಕಲ್ ಫಿಸಿಕ್ಸಿನಲ್ಲಿ. ಆಗ ನನಗೆ ಜೀವಿವಿಜ್ಞಾನದಲ್ಲಿ ಒಂದಿಷ್ಟೂ ಅನುಭವವಿರಲಿಲ್ಲ. ಆದರೆ ಭಾಭಾ ಪರಮಾಣು ಸಂಶೋಧನಾ ಕೇಂದ್ರದಲ್ಲಿ ವಿಜ್ಞಾನಿಯಾಗಿ ಸೇರಿ, ತರಬೇತಿ ಪಡೆಯುತ್ತಿದ್ದಾಗ ರೇಡಿಯೋಬಯಾಲಜಿಯ ಬಗ್ಗೆ ಕೆಲವು ಭಾಷಣಗಳನ್ನು ಕೇಳುವ ಅವಕಾಶ ಸಿಕ್ಕಿತ್ತು. ಅವು ಜೀವಿವಿಜ್ಞಾನದಲ್ಲಿ ನನ್ನ ಆಸಕ್ತಿಯನ್ನು ಕುದುರಿಸಿದುವು. ಹೀಗೆ ನಾನು ನನ್ನ ಸಂಶೋಧನೆಯನ್ನು ಫಿಸಿಕ್ಸಿನಿಂದ ಜೀವಿವಿಜ್ಞಾನಕ್ಕೆ ಬದಲಿಸಿದೆ. ಈ ರೀತಿಯಲ್ಲಿ ನಾನು ನನ್ನ ಕ್ಷೇತ್ರವನ್ನು ಹಲವು ಬಾರಿ ಬದಲಿಸಿದ್ದಿದೆ.

**ನಾನು ಸ್ನಾತಕೋತ್ತರ ಪದವಿಯನ್ನು ಪಡೆದಿದ್ದು ಥಿಯರೆಟಿಕಲ್ ಫಿಸಿಕ್ಸಿನಲ್ಲಿ. ಆಗ ನನಗೆ ಜೀವಿವಿಜ್ಞಾನದಲ್ಲಿ ಒಂದಿಷ್ಟೂ ಅನುಭವವಿರಲಿಲ್ಲ. ಆದರೆ ಭಾಭಾ ಪರಮಾಣು ಸಂಶೋಧನಾ ಕೇಂದ್ರದಲ್ಲಿ ವಿಜ್ಞಾನಿಯಾಗಿ ಸೇರಿ, ತರಬೇತಿ ಪಡೆಯುತ್ತಿದ್ದಾಗ ರೇಡಿಯೋಬಯಾಲಜಿಯ ಬಗ್ಗೆ ಕೆಲವು ಭಾಷಣಗಳನ್ನು ಕೇಳುವ ಅವಕಾಶ ಸಿಕ್ಕಿತ್ತು. ಅವು ಜೀವಿವಿಜ್ಞಾನದಲ್ಲಿ ನನ್ನ ಆಸಕ್ತಿಯನ್ನು ಕುದುರಿಸಿದುವು.**

ಬಾಬಾ ಪರಮಾಣು ಸಂಶೋಧನಾ ಕೇಂದ್ರದಲ್ಲಿ ನಾನು ಇಪ್ಪತ್ತೈದು ವರ್ಷ ವಿಜ್ಞಾನಿಯಾಗಿದ್ದೆ. ರೋಗಪ್ರತಿರೋಧಕತೆ, ಇಮ್ಯುನಾಲಜಿಯಲ್ಲಿ ಸಂಶೋಧನೆ ಮಾಡಿದೆ. ಆದರೆ ಬಾಲ್ಯದಿಂದಲೂ ನನಗೆ ಬರೆವಣಿಗೆಯಲ್ಲಿ ಆಸಕ್ತಿ ಇತ್ತು. ಹಾಗಿದ್ದೂ ಏನನ್ನೂ ಪ್ರಕಟಿಸಿರಲಿಲ್ಲ. ಕಾಲೇಜಿನಲ್ಲಿ ಇದ್ದಾಗ ಪತ್ರಿಕೆಗಳಲ್ಲಿ ಕೆಲವು ಕಥೆಗಳನ್ನು ಪ್ರಕಟಿಸಿದ್ದುಂಟು. ಆದರೆ ಅವು ಸಾಧಾರಣ ಕಥೆಗಳು. ಬಹುತೇಕ ಹಾಸ್ಯಕಥೆಗಳು. ಅನಂತರ ನಾನು ಭಾಭಾ ಕೇಂದ್ರವನ್ನು ಸೇರಿ, ಡಾಕ್ಟರೇಟು ಮಾಡಿದೆ. ಈ ಸಮಯದಲ್ಲಿ, ಅಂದರೆ ಸುಮಾರು ಹನ್ನೆರಡು ವರ್ಷಗಳ ಕಾಲ, ನನ್ನ ಬರೆವಣಿಗೆ ನಿಂತೇ ಹೋಗಿತ್ತು ಎನ್ನಿ. ಸಮಯವೂ ಇರಲಿಲ್ಲ, ಆಸಕ್ತಿಯೂ ಇರಲಿಲ್ಲ.

"ಅನಂತರ ಲಂಡನ್ನಿಗೆ ಹೋಗಬೇಕಾಯಿತು. ಅಲ್ಲಿ ನನ್ನ ಸಹೋದ್ಯೋಗಿ ಟೋನಿ ಮಾರಿಸನ್ ಐಸಾಕ್ ಅಸಿಮೋವ್ ಮೊದಲಾದವರು ಬರೆದ ವೈಜ್ಞಾನಿಕ ಕಥೆಗಳನ್ನು ನನಗೆ ಪರಿಚಯಿಸಿದ. ಲೈಬ್ರರಿಯಿಂದ ಆತ ಪುಸ್ತಕಗಳನ್ನು ತಂದು ಓದಲು ನನಗೆ ಕೊಡುತ್ತಿದ್ದ. ಕೆಲವನ್ನು ಓದಿದೆ. ಅಷ್ಟೇನೂ ಅರ್ಥವಾಗದಿದ್ದರೂ, ಅವು ಕುತೂಹಲವನ್ನು ಕೆರಳಿಸಿದವು. ವೈಜ್ಞಾನಿಕ ಕಥೆಗಳನ್ನು ಬರೆಯಬೇಕೆಂಬ ಹಂಬಲವನ್ನು ನನ್ನ ಮನಸ್ಸಿನಲ್ಲಿ ಬಿತ್ತಿದುವು.

"ಭಾರತಕ್ಕೆ ಮರಳಿದ ಮೇಲೆ ಅಂತಹುದೊಂದು ಅವಕಾಶವೂ ಸಿಕ್ಕಿತು. ಮರಾಠಿ ದಿನಪತ್ರಿಕೆಯ ಸಂಪಾದಕರೊಬ್ಬರು, ಪತ್ರಿಕೆಯಲ್ಲಿ ವಾರಕ್ಕೊಮ್ಮೆ ವಿಜ್ಞಾನದ ಪುಟವನ್ನು ಪ್ರಕಟಿಸಬೇಕೆಂದು ಯೋಚಿಸಿ, ಭಾಭಾ ಕೇಂದ್ರದಿಂದ ಕೆಲವರನ್ನು ಜೊತೆಗೂಡಿಸಿ ಚರ್ಚಿಸಿದರು. ಫಲವಾಗಿ ನಾನು ಕೆಲವು ಲೇಖನಗಳನ್ನು ಬರೆಯಬೇಕಾಯಿತು. ಸ್ವಲ್ಪ ಕಾಲದ ನಂತರ, ಪತ್ರಿಕೆಯಲ್ಲಿ ಏನೇನೋ ಬದಲಾವಣೆಗಳಾದುವು. ಆ ಪುಟದ ಪ್ರಕಟಣೆ ನಿಂತಿತು. ಆದರೆ ನನ್ನ ಬರೆವಣಿಗೆ ಆರಂಭವಾಗಿತ್ತು. ಈ ಬರೆಯುವ ಹಂಬಲ ಆರಂಭದಿಂದಲೂ ನನ್ನಲ್ಲಿ ಇತ್ತು ಎನಿಸುತ್ತದೆ.

"ಅನಂತರ ಯಾರೋ ನನಗೆ ನೀನು ಕೇವಲ ವಿಜ್ಞಾನದ ಬಗ್ಗೆ ಬರೆಯುವುದಕ್ಕೆ ಗಮನ ಕೊಡು ಎಂದರು. ಹಾಗೇ ಮಾಡಿದೆ. 1974–75ರ ಸುಮಾರಿರಬೇಕು. ಪ್ರೊಫೆಸರ್ ಜಯಂತ್ ನಾರಳೀಕರರು ವೈಜ್ಞಾನಿಕ ಕಥೆಗಳನ್ನು ಬರೆಯಲು ಆರಂಭಿಸಿದ್ದರು. ಅವರ ಹಲವು ಕಥೆಗಳು ಪ್ರಕಟವಾಗಿದ್ದುವು. ಅದರಲ್ಲಿ ಒಂದು ಕಥೆ, ಬಲಗೈ ವ್ಯಕ್ತಿಯು ಎಡಚನಾದ ಬಗ್ಗೆ ಇತ್ತು."

**ಕುತೂಹಲಿ:** *ಓ. ಅದು ಅವರ ಸುಪ್ರಸಿದ್ಧ ಗಣೇಶನ ಕಥೆ ಅಲ್ಲವೇ?*

**ಬಾಳ ಫೋಂಡ್ಕೆ:** "ಹೌದು. ಎಡಮುರಿ ಗಣೇಶನ ಕಥೆ. ಅದು ಫಿಸಿಕ್ಸ್ ನಿಯಮಗಳನ್ನು ಆಧರಿಸಿ ಬರೆದ ಕಥೆ. ಅದನ್ನು ಓದಿದ ನನಗೆ ಜೀವಿವಿಜ್ಞಾನದಲ್ಲಿಯೂ, ಪ್ರೊಟೀನುಗಳಲ್ಲಿ ಇಂತಹ ನಿಯಮಗಳು ಇವೆಯಲ್ಲ ಎನಿಸಿತು. ಪ್ರೊಟೀನುಗಳು ಅಮೈನೊ ಆಮ್ಲಗಳಿಂದ ಮಾಡಲ್ಪಟ್ಟಿವೆಯಷ್ಟೆ. ಈ ಆಮ್ಲಗಳಲ್ಲಿ ಎರಡು ಬಗೆಗಳಿವೆ. ಎಡಮುಖಿ ಹಾಗೂ ಬಲಮುಖಿ. ಆದರೆ ಜೀವಿಗಳಲ್ಲಿ ಕೇವಲ ಎಡಮುಖಿ ಅಮೈನೊ ಆಮ್ಲಗಳಷ್ಟೆ ಬಳಕೆಯಾಗುತ್ತವೆ. ಬಲಮುಖಿಯದ್ದಲ್ಲ. ಆಗ ನನಗೊಂದು ಕಲ್ಪನೆ ಬಂತು. ಬಲಮುಖಿ ಅಮೈನೊ ಆಮ್ಲಗಳನ್ನಷ್ಟೆ ಬಳಸುವ ರೋಗಾಣುವಿದ್ದರೆ, ಅದು ಮಹಾ ಹಾವಳಿಯನ್ನು ಮಾಡಬಹುದಲ್ಲ? ಅದನ್ನು ಕಥೆಯಾಗಿ ಬರೆದೆ. ಎಡಮುರಿ ಗಣೇಶ ಎಂದೇ ಅದಕ್ಕೆ ಹೆಸರಿಟ್ಟೆ. ನನ್ನ ಬರೆವಣಿಗೆ ಆರಂಭವಾಗಿದ್ದು ಈ ರೀತಿ.

ಇದು ಹೀಗೇ ಸ್ವಲ್ಪ ಸಮಯ ನಡೆಯಿತು. ಏಳೆಂಟು ವರ್ಷಗಳಾಗಿರಬೇಕು. ಒಂದ ದಿನ ಟೈಂಸ್ ಆಫ್ ಇಂಡಿಯಾದ ಕಛೇರಿಯಿಂದ ಕರೆ ಬಂತು. ಅವರು ತಮ್ಮ ಪತ್ರಿಕೆ ಸೈನ್ಸ್ ಟುಡೇಗಾಗಿ ಸಂಪಾದಕರನ್ನು ಹುಡುಕುತ್ತಿದ್ದರು. ನಾನು ಸೈನ್ಸ್ ಟುಡೇಯಲ್ಲಿಯೂ ಕೆಲವು ಲೇಖನಗಳನ್ನು ಪ್ರಕಟಿಸಿದ್ದೆ. ಅವು ವೈಜ್ಞಾನಿಕ ಕಥೆಗಳೇನಲ್ಲ. ಜನಪ್ರಿಯ ವಿಜ್ಞಾನ ಲೇಖನಗಳು ಎನ್ನಿ. ಸಂಶೋಧನಾ ಪತ್ರಿಕೆಗಳಲ್ಲಿ ಪ್ರಕಟವಾದ ಪ್ರಬಂಧಗಳನ್ನು ಆಧರಿಸಿದ ವಿಜ್ಞಾನ ಲೇಖನಗಳು. ಅವನ್ನು ನೋಡಿದ ಯಾರೋ ನನ್ನ ಹೆಸರನ್ನು ಶಿಫಾರಿಸು ಮಾಡಿದ್ದರು. ಮ್ಯಾನೇಜಿಂಗ್ ಡೈರೆಕ್ಟರು ಭೇಟಿಯಾಗಲು ಕರೆದಿದ್ದರು. ಆ ಭೇಟಿ ಸಂದರ್ಶನವಾಗಿಬಿಟ್ಟಿತು. ಎರಡು ದಿನಗಳ ನಂತರ ನನ್ನನ್ನು ಸಂಪಾದಕನನ್ನಾಗಿ ಆಯ್ಕೆ ಮಾಡಿದ್ದೇವೆ ಎಂದು ತಿಳಿಸಿದರು. ತೀರ್ಮಾನ ತೆಗೆದುಕೊಳ್ಳಲು ಕಷ್ಟವೇ ಆಯಿತು. ಸರ್ಕಾರಿ ಕ್ಷೇತ್ರದಲ್ಲಿ ಖಾತ್ರಿಯಾಗಿದ್ದ ಉದ್ಯೋಗವನ್ನು ಬಿಟ್ಟು, ಖಾಸಗಿ ಕ್ಷೇತ್ರಕ್ಕೆ ಬದಲಾಯಿಸುವುದು ಕಷ್ಟವೇ. ಆದರೆ ನನಗೆ ಖುಷಿ ಕೊಡುವುದನ್ನೇ ಉದ್ಯೋಗವನ್ನಾಗಿ ಮಾಡಿಕೊಳ್ಳುವ ಅವಕಾಶ ಇದು ಎಂದೂ ಅನಿಸಿತು. ಜಿಗಿದುಬಿಟ್ಟೆ. ಹೀಗೆ ಸಂಪಾದಕ ಎನ್ನಿಸಿಕೊಂಡೆ.

"ನಾನು ಈ ತೀರ್ಮಾನವನ್ನು ತೆಗೆದುಕೊಂಡಾಗ, ನನ್ನ ನಿಕಟವರ್ತಿಗಳು ಹಲವರು ಎಚ್ಚರಿಕೆ ನೀಡಿದ್ದರು. ನನ್ನ ವೃತ್ತಿಯ ಹರಾಕಿರಿ ಇದು ಎಂದು ಹೇಳಿದ್ದರು. ಆಗ ಟಾಟಾ ಇನ್ಸ್ಟಿಟ್ಯೂಟ್ ಆಫ್ ಫಂಡಮೆಂಟಲ್ ರೀಸರ್ಚ್ ಸಂಸ್ಥೆಯಲ್ಲಿ ಪ್ರೊಫೆಸರಾಗಿದ್ದ ಡಾ. ಬಿ. ಎಂ. ಉದಗಾಂವಕರ್ ಹಾಗೂ ಹಿಂದೆ ಸಿಎಸ್‌ಐಆರ್‌ನ ಸೆಂಟರ್ ಫಾರ್ ಸೆಲ್ಯುಲಾರ್ ಅಂಡ್ ಮಾಲಿಕ್ಯುಲಾರ್ ಬಯಾಲಜಿಯಲ್ಲಿ ನಿರ್ದೇಶಕರಾಗಿದ್ದ ಡಾ. ಡಿ. ಬಾಲಸುಬ್ರಮಣ್ಯಂ, ಯೋಚಿಸಬೇಡ, ಮುನ್ನಡೆ ಎಂದು ಪ್ರೇರೇಪಿಸಿದರು'.

**ಕುತೂಹಲಿ:** *ಹೊಸ ವೃತ್ತಿಗೆ ಬಂದ ಮೇಲೆ ಪ್ರಯೋಗಾಲಯದ ನೆನಪಾಗುತ್ತಿತ್ತೇ?*

**ಬಾಳ ಫೋಂಡ್ಕೆ:** " ಇಲ್ಲ. ಈ ತೀರ್ಮಾನ ತೆಗೆದುಕೊಂಡ ಬಗ್ಗೆ ನಾನು ಎಂದೂ ಪರಿತಪಿಸಿಲ್ಲ. ಈಗಲೂ ನನಗೆ ವಿಷಾದವಿಲ್ಲ. ಏಕೆಂದರೆ ಭಾಭಾ ಕೇಂದ್ರದಲ್ಲಿ ಅಷ್ಟರಲ್ಲಾಗಲೇ ನಾನು ಸಾಕಷ್ಟು ಸಮಯ ಕಳೆದಿದ್ದೆ. ಇನ್ನೂ ಮುಂದುವರೆದಿದ್ದರೆ ಹೆಚ್ಚು ಎಂದರೆ ಒಂದೋ, ಎರಡೋ ಅಕಾಡೆಮಿಗಳ ಫೆಲೋಶಿಪ್ ಗಳಿಸಬಹುದಿತ್ತು. ಆದರೆ ವಿಜ್ಞಾನದ ಬುಡವನ್ನೇ ಅಲ್ಲಾಡಿಸುವಂತಹ ಮಹಾ ಕ್ರಾಂತಿಕಾರಕ ಸಂಶೋಧನೆಯನ್ನೇನೂ ಮಾಡುತ್ತಿರಲಿಲ್ಲ ಬಿಡಿ. ಹೀಗಾಗಿ, "ಹೊಸ ವೃತ್ತಿಯನ್ನೇಕೆ ಮಾಡಬಾರದು?"

ಭಾರತೀಯ ಕಥೆಗಳೆಲ್ಲವೋ ಸಾಮಾನ್ಯವಾಗಿ ಇಂಗ್ಲೀಷಿನಲ್ಲಿ ಪ್ರಕಟವಾದವುಗಳ ರೂಪಾಂತರಗಳೆನ್ನುವ ಅಪವಾದವೂ ಇದೆ. ಇಂಗ್ಲೀಷಿನಲ್ಲಿ ಭಾರತೀಯ ವೈಜ್ಞಾನಿಕ ಕಥೆಗಳು ಅಷ್ಟೇನೂ ಇಲ್ಲ ಎನ್ನುವುದು ಬೇರೆ ಮಾತು. ಈ ಎಲ್ಲ ದೂರುಗಳ ಬಗ್ಗೆ ನಿಮ್ಮ ಅಭಿಪ್ರಾಯವೇನೋ?



ಎಂದು ಆಲೋಚಿಸಿದೆ. ಟೈಂಸ್ ಆಫ್ ಇಂಡಿಯಾಗೆ ಹೋಗಿ ಸೈನ್ಸ್ ಟುಡೇಯನ್ನು ಸಂಪಾದಿಸಲು ಆರಂಭಿಸಿದೆ. ಅನಂತರ, ಅವರದ್ದೇ ದಿನಪತ್ರಿಕೆಯಲ್ಲಿ ವಿಜ್ಞಾನದ ಪರಿವಿಡಿಯೊಂದರ ಸಂಪಾದಕನಾಗಿದ್ದೆ.

"ಹೀಗಿದ್ದಾಗ ಒಂದು ದಿನ ಸಿಎಸ್‌ಐಆರ್ ಸಂಸ್ಥೆಯಲ್ಲಿ ಅಂದು ಮಹಾನಿರ್ದೇಶಕರಾಗಿದ್ದ ಡಾ. ಎ. ಪಿ. ಮಿತ್ರಾ, ಪ್ರಧಾನಮಂತ್ರಿಗಳ ಆದೇಶದ ಮೇರೆಗೆ ನನ್ನನ್ನು *ಪಬ್ಲಿಕೇಶನ್ಸ್ ಅಂಡ್ ಇನ್‌ಫರ್ಮೇಶನ್ ಡೈರೆಕ್ಟೊರೇಟ್‌*ನ ನಿರ್ದೇಶಕನನ್ನಾಗಿ ನೇಮಿಸಲಾಗಿದೆ ಎಂದು ಪತ್ರ ಬರೆದರು. ಇನ್ನೊಮ್ಮೆ ತೀರ್ಮಾನ ತೆಗೆದುಕೊಳ್ಳಬೇಕಾದ ಕಷ್ಟ ಒದಗಿತು. ಏಕೆಂದರೆ ನಾನು ಈಗ ಕೇವಲ ಕೆಲಸವನ್ನಷ್ಟೆ ಬದಲಿಸುತ್ತಿರಲಿಲ್ಲ, ವಾಸವನ್ನೂ ಮುಂಬಯಿಯಿಂದ ದೆಹಲಿಗೆ ಬದಲಿಸಬೇಕಾಯಿತು. ಪುಣ್ಯಕ್ಕೆ ನನ್ನ ಮಗಳ ಓದು ಮುಗಿದಿತ್ತು. ಮಗನ ಓದು ಕೊನೆಮುಟ್ಟುತ್ತಿತ್ತು. ನನ್ನ ಮಡದಿಯ ಜೊತೆಗೆ ಚರ್ಚಿಸಿ ದೆಹಲಿಗೆ ಹೋಗಲು ನಿರ್ಧರಿಸಿದೆ. ಹೀಗೆ ನಾನು ಸೈನ್ಸ್ ರಿಪೋರ್ಟರಿನ ಪ್ರಧಾನ ಸಂಪಾದಕ ಹಾಗೂ ಡೈರೆಕ್ಟೊರೇಟಿನ ನಿರ್ದೇಶಕನಾದೆ.

"ಈ ಯಾವ ತೀರ್ಮಾನಗಳ ಬಗ್ಗೆಯೂ ನನಗೆ ಪಶ್ಚಾತ್ತಾಪವಿಲ್ಲ. ಪ್ರತಿಯೊಂದು ವೃತ್ತಿಯೂ ಒಂದು ಸವಾಲೇ. ಎಲ್ಲದರಲ್ಲಿಯೂ ಕಷ್ಟಗಳು ಬಂದೇ ಬರುತವಷ್ಟೆ. ನಾನು ಇವನ್ನು ನಿಭಾಯಿಸುವೆನೋ ಎನ್ನುವ ಅನುಮಾನ ಒಂದಿಷ್ಟು ಇದ್ದಿರಬಹುದು. ಆದರೆ ಪಶ್ಚಾತ್ತಾಪವಿರಲಿಲ್ಲ."

**ಕುತೂಹಲಿ:** *ನೀವು ಇಂಗ್ಲೀಷು ಮತ್ತು ಮರಾಠಿ ಎರಡೂ ಭಾಷೆಗಳಲ್ಲಿಯೂ ವೈಜ್ಞಾನಿಕ ಕಥೆಗಳನ್ನು ಬರೆದಿದ್ದೀರಿ. ಭಾರತೀಯ ವೈಜ್ಞಾನಿಕ ಕಥಾ ಕ್ಷೇತ್ರ ಇನ್ನೂ ಅಂಬೆಗಾಲಿಕ್ಕುತ್ತಿದೆ ಎನ್ನುವ ದೂರಿದೆ. ಜೊತೆಗೆ ಭಾರತೀಯ ಕಥೆಗಳೆಲ್ಲವೂ ಸಾಮಾನ್ಯವಾಗಿ ಇಂಗ್ಲೀಷಿನಲ್ಲಿ ಪ್ರಕಟವಾದವುಗಳ ರೂಪಾಂತರಗಳೆನ್ನುವ ಅಪವಾದವೂ ಇದೆ. ಇಂಗ್ಲೀಷಿನಲ್ಲಿ ಭಾರತೀಯ ವೈಜ್ಞಾನಿಕ ಕಥೆಗಳು ಅಷ್ಟೇನೂ ಇಲ್ಲ ಎನ್ನುವುದು ಬೇರೆ ಮಾತು. ಈ ಎಲ್ಲ ದೂರುಗಳ ಬಗ್ಗೆ ನಿಮ್ಮ ಅಭಿಪ್ರಾಯವೇನೋ?*

**ಬಾಳ ಫೋಂಡ್ಕೆ:** "ಈ ಮಾತನ್ನು ನಾನು ಒಪ್ಪುವುದಿಲ್ಲ. ಅದರಲ್ಲೂ ಮರಾಠಿಯ ವೈಜ್ಞಾನಿಕ ಕಥೆಗಳ ಬಗ್ಗೆ ಈ ಮಾತು ನಿಜವಲ್ಲ. ಮರಾಠಿಯಲ್ಲಿ ಈ ಕ್ಷೇತ್ರ ಪ್ರಬುದ್ಧವಾಗಿ ಬೆಳೆದಿದೆ. ಬಹುತೇಕ ಕಥೆಗಳು ಹೊಚ್ಚ ಹೊಸವು. ಮರಾಠಿ ಸಾಹಿತ್ಯದಲ್ಲಿ ವೈಜ್ಞಾನಿಕ ಸಾಹಿತ್ಯ ಹೇಗೆ ಬೇರೂರಿದೆ ಎಂದರೆ ಪ್ರತಿ ವರ್ಷ ದೀಪಾವಳಿಯಲ್ಲಿ ಪ್ರಕಟವಾಗುವ ವಿಶೇಷಾಂಕಗಳು ಯಾವುದನ್ನು ತೆರೆದು

ನೋಡಿದರೂ ಒಂದಾದರೂ ವೈಜ್ಞಾನಿಕ ಕಥೆ ಇದ್ದೇ ಇರುತ್ತದೆ. ಅದೂ ಹೊಚ್ಚ ಹೊಸದು. ರೂಪಾಂತರವಾದದ್ದಲ್ಲ. ಖುಷಿ ಕೊಡುವ ವಿಷಯ ಎಂದರೆ, ಡಾ. ನಾರಳೀಕರ್, ನಾನು, ನಮ್ಮಂತಹವರು ಕಾಲ ಮುಗಿದಿದೆ. ಹೊಸ ಪೀಳಿಗೆಯ ಹಲವು ಲೇಖಕರು ಮೊಳೆತಿದ್ದಾರೆ. ಕಳೆದ ಎರಡು, ಮೂರು ವರ್ಷಗಳಲ್ಲಿಯೇ ನಾನು ಐದಾರು ಹೊಸದಾದ, ಭರವಸೆ ತರುವಂತಹ ಯುವ ಲೇಖಕರ ಕಥೆಗಳು ಪ್ರಕಟವಾಗಿದ್ದನ್ನು ಕಂಡಿದ್ದೇನೆ. ಇವರ ಕಥೆಗಳನ್ನು ನಾನು ಬಹಳ ಸುಧಾರಣೆಯಾದವು ಎನ್ನಲಾರೆ. ಆದರೆ ನಮ್ಮ ಪೀಳಿಗೆಯವಕ್ಕಿಂತಲೂ ಅವು ನವೀನವೆನ್ನಬಹುದು."

**ಕುತೂಹಲಿ:** *ಯಾವ ದೃಷ್ಟಿಯಲ್ಲಿ ಅವು ನವೀನ?*

**ಬಾಳ ಫೋಂಡ್ಕೆ:** "ಎರಡು ವಿಧದಲ್ಲಿ ಅವು ನವೀನ. ಮೊದಲನೆಯದು, ನನ್ನ ಮಟ್ಟಿಗೆ ವೈಜ್ಞಾನಿಕ ಕಥೆ ಎಂದರೆ ಅವು ರೋಬಾಟುಗಳು ಅಥವಾ ಅನ್ಯಗ್ರಹಜೀವಿಗಳ ಬಗ್ಗೆ ಬರೆದ ಕಥೆಗಳಲ್ಲ. ಅವು ಕೂಡ ಮಾನವರ ಕಥೆಗಳೇ. ವಿಜ್ಞಾನ ಮತ್ತು ತಂತ್ರಜ್ಞಾನದ ಅಭಿವೃದ್ಧಿಯಿಂದಾಗಿ ಮಾನವರು ಎದುರಿಸಬೇಕಾದ ಸವಾಲುಗಳ ಕಥೆ. ಈ ಸವಾಲುಗಳು ಈಗಿನದ್ದಲ್ಲದಿರಬಹುದು, ನಾಳೆ ಅವು ಆಗಬಹುದು. ಈ ಯುವ ಲೇಖಕರುಗಳು ಹೊಸ, ಹೊಸ ವೈಜ್ಞಾನಿಕ ಶೋಧಗಳನ್ನು ಗಮನಿಸಿ, ಅವುಗಳ ನಾಳಿನ ಭವಿಷ್ಯವನ್ನು ಕಲ್ಪಿಸಿಕೊಂಡು, ಮನುಷ್ಯರು ಎಂತಹ ಸವಾಲನ್ನು ಎದುರಿಸಬೇಕಾಗಬಹುದು ಎಂ ಬಗ್ಗೆ ಬರೆಯುತ್ತಿದ್ದಾರೆ. ಈ ನಿಟ್ಟಿನಲ್ಲಿ ಅವರ ಬರೆಹಗಳು ವಿನೂತನ."

**ಕುತೂಹಲಿ:** *ವೈಜ್ಞಾನಿಕ ಕಥೆಗಳು ಎಂದರೆ ಕಾಲ ಮತ್ತು ಸ್ಥಳಗಳಲ್ಲಿ ದೂರ ಕಾಯ್ದುಕೊಳ್ಳುವ ಅವಾಸ್ತವ ಕಥಾನಕಗಳಲ್ಲವೇ?*

**ಬಾಳ ಫೋಂಡ್ಕೆ:** "ಹಾಗೇನಿರಬೇಕಿಲ್ಲ. ಒಂದು ಕಾಲ ಇತ್ತು. ವಿಜ್ಞಾನದಲ್ಲಿನ ಸಂಶೋಧನೆಗಳ ಫಲಿತಾಂಶ ತಿಳಿಯುವುದಕ್ಕೂ, ಅವು ಮನುಷ್ಯರ ಬದುಕನ್ನು ಪ್ರಭಾವಿಸುವುದಕ್ಕೂ ಬಹಳಷ್ಟು ಸಮಯ ಬೇಕಾಗುತ್ತಿತ್ತು. ಇವತ್ತು ನಾವು ನಮ್ಮ ಬದುಕನ್ನು ವಿಜ್ಞಾನ ಮತ್ತು ತಂತ್ರಜ್ಞಾನದಲ್ಲಿನ ಬೆಳವಣಿಗೆಗಳು ನಿತ್ಯವೂ ಬಾಧಿಸುವುದನ್ನು ಕಾಣುತ್ತೇವೆ. ನಮಗೆ ಬೇಕೋ, ಬೇಡವೋ, ಕೆಲವು ಶೋಧಗಳು, ವಿಶೇಷವಾಗಿ ಜೈವಿಕ ತಂತ್ರಜ್ಞಾನದ ಸಂಶೋಧನೆಗಳು, ನಮ್ಮ ಖಾಸಗಿ ಬದುಕಿನೊಳಗೂ ಪ್ರವೇಶಿಸಿಬಿಟ್ಟಿವೆ. ಐವಿಎಫ್, ಪ್ರನಾಳ ಶಿಶು ತಂತ್ರದಂತಹ ಸಂಗತಿಗಳು ನಮ್ಮ ಬದುಕನ್ನು ತಾಕುತ್ತಿವೆ. ಈ ಎಲ್ಲ ಬೆಳವಣಿಗೆಗಳಿಂದ ವೈಜ್ಞಾನಿಕ ಕಥೆಗಳು ದೂರವಿರಲು ಸಾಧ್ಯವಿಲ್ಲ. ಇಂದಲ್ಲ ನಾಳೆ ಇದು ಸತ್ಯವಾಗುತ್ತದೆ, ನಮ್ಮ ಬದುಕನ್ನು ಬಾಧಿಸಿಯೇ ಬಾಧಿಸುತ್ತದೆ. ವಿಜ್ಞಾನದಲ್ಲಿ ಆಗುತ್ತಿರುವ ಬದಲಾವಣೆಗಳ ಗತಿ ಹೇಗಿದೆ ಎಂದರೆ, ಇವತ್ತು ಇದು ಆಗದೇ ಇದ್ದರೂ, ನಾಳೆ ಖಂಡಿತ ಎನ್ನುವಂತಾಗಿದೆ. ಆದ್ದರಿಂದ ವೈಜ್ಞಾನಿಕ ಕಥೆಗಳು ಕೇವಲ ಸಾಹಸ, ಅವಾಸ್ತವಿಕ ಅಥವಾ ಹ್ಯಾರಿ ಪಾಟರನ ಕಥೆಗಳ ಹಾಗೆ ಮಾಂತ್ರಿಕವಾಗಿರಬೇಕು ಎನ್ನುವುದನ್ನು ನಾನು ಒಪ್ಪುವುದಿಲ್ಲ. ಹ್ಯಾರಿ ಪಾಟರನ ಕಥೆಗಳನ್ನು ನಾನು ವೈಜ್ಞಾನಿಕ ಕಥೆ ಎನ್ನಲಾರೆ. ಅದು ಏನಿದ್ದರೂ ಒಂದು ಅದ್ಭುತ ಕಥೆ ಅಷ್ಟೆ. ಅದನ್ನು ವೈಜ್ಞಾನಿಕ ಕಥೆ ಎನ್ನಲಾಗದು."

ನಮಗೆ ಬೇಕೋ, ಬೇಡವೋ, ಕೆಲವು ಶೋಧಗಳು, ವಿಶೇಷವಾಗಿ ಜೈವಿಕ ತಂತ್ರಜ್ಞಾನದ ಸಂಶೋಧನೆಗಳು, ನಮ್ಮ ಖಾಸಗಿ ಬದುಕಿನೊಳಗೂ ಪ್ರವೇಶಿಸಿಬಿಟ್ಟಿವೆ. ಐವಿಎಫ್, ಪ್ರನಾಳ ಶಿಶು ತಂತ್ರದಂತಹ ಸಂಗತಿಗಳು ನಮ್ಮ ಬದುಕನ್ನು ತಾಕುತ್ತಿವೆ. ಈ ಎಲ್ಲ ಬೆಳವಣಿಗೆಗಳಿಂದ ವೈಜ್ಞಾನಿಕ ಕಥೆಗಳು ದೂರವಿರಲು ಸಾಧ್ಯವಿಲ್ಲ. ಇಂದಲ್ಲ ನಾಳೆ ಇದು ಸತ್ಯವಾಗುತ್ತದೆ, ನಮ್ಮ ಬದುಕನ್ನು ಬಾಧಿಸಿಯೇ ಬಾಧಿಸುತ್ತದೆ. ವಿಜ್ಞಾನದಲ್ಲಿ ಆಗುತ್ತಿರುವ ಬದಲಾವಣೆಗಳ ಗತಿ ಹೇಗಿದೆ ಎಂದರೆ, ಇವತ್ತು ಇದು ಆಗದೇ ಇದ್ದರೂ, ನಾಳೆ ಖಂಡಿತ ಎನ್ನುವಂತಾಗಿದೆ.

**ಕುತೂಹಲಿ:** *ನೀವು ಮರಾಠಿ ಹಾಗೂ ಇಂಗ್ಲೀಷು ಭಾಷೆಗಳೆರಡರಲ್ಲೂ ವಿಜ್ಞಾನ ಸಂವಹನ ಮಾಡುತ್ತಿದ್ದೀರಿ. ಎರಡರಲ್ಲಿ ಏನಾದರೂ ವ್ಯತ್ಯಾಸಗಳನ್ನು ಕಂಡಿರೇ?*

**ಬಾಳ ಫೋಂಡ್ಕೆ:** "ನಿಜ. ಕಂಡಿದ್ದೇನೆ. ಮರಾಠಿಯಲ್ಲಿ ಬರೆಯುವುದು ಹೆಚ್ಚು ಖುಷಿ ಕೊಡುತ್ತದೆ. ಮರಾಠಿಯಲ್ಲಿ ಅಥವಾ ಯಾವುದೇ ಭಾರತೀಯ ಭಾಷೆಯಲ್ಲಿ ವಿಜ್ಞಾನ ಸಂವಹನ ಮಾಡುವುದಕ್ಕೆ ಅವುಗಳಲ್ಲಿ ಸಾಕಷ್ಟು ತಾಂತ್ರಿಕ ಪದಸಂಪತ್ತು ಇಲ್ಲ ಎನ್ನುವುದನ್ನು ನಾನು ಒಪ್ಪುವುದಿಲ್ಲ. ವಿಜ್ಞಾನ ಸಂವಹನ ಮಾಡುವಾದ, ಅದರಲ್ಲಿಯೂ ಜನಪ್ರಿಯ ವಿಜ್ಞಾನದ ವಿಷಯದಲ್ಲಿ, ಪರಿಕಲ್ಪನೆಗಳನ್ನು ಸ್ಪಷ್ಟವಾಗಿ ವಿವರಿಸುವುದು ಮುಖ್ಯವೇ ಹೊರತು, ಪದಗಳ ಬಳಕೆಯಲ್ಲ. ಕೆಲವೊಮ್ಮೆ ನಾವು ಹೊಸದೊಂದು ಪದವನ್ನು ಕಟ್ಟಬೇಕಾಗಬಹುದು. ಆದರೆ ಹೊಸ ಪದಗಳನ್ನು ಕಟ್ಟುವುದೇ ಪ್ರಧಾನವಾಗಬಾರದು. ಆ ಪದವೂ ಸಂವಹನಶಾಲಿಯಾಗಿರಬೇಕು. ಭಾರತೀಯ ಭಾಷೆಗಳಲ್ಲಿ ಜನಪ್ರಿಯ ವಿಜ್ಞಾನವನ್ನು ಬರೆಯುವುದು ಇಂಗ್ಲೀಷಿನಲ್ಲಿ ಬರೆಯುವುದಕ್ಕಿಂತಲೂ ಹೆಚ್ಚಿನ ಸವಾಲಿನದು ಎನ್ನಿಸುವುದಕ್ಕೆ ಬಹುಶಃ ಅವುಗಳಲ್ಲಿರುವ ವೈವಿಧ್ಯವೂ ಒಂದು ಕಾರಣ. ಮರಾಠಿಯಲ್ಲಿಯೂ ಹಲವಾರು ಉಪಭಾಷೆಗಳೀವೆ. ಇದು ಸವಾಲೊಡ್ಡುತ್ತದೆ."

**ಕುತೂಹಲಿ:** *ಅಂದರೆ?*

**ಬಾಳ ಫೋಂಡ್ಕೆ:** "ಇದೊಂದು ನಡೆದ ಘಟನೆ. ನಾನು ಸೂಕ್ಷ್ಮಜೀವಿವಿಜ್ಞಾನ ಹಾಗೂ ಫರ್ಮೆಂಟೇಶನ್ನಿನ ಬಗ್ಗೆ ಒಂದು ಲೇಖನ ಬರೆಯುತ್ತಿದ್ದೆ. ಮರಾಠಿಯ ನಿಘಂಟುಗಳಲ್ಲಿ ಹುಡುಕಿದರೆ, ಫರ್ಮೆಂಟೇಶನ್ನಿಗೆ ಕಿಣ್ವನ ಎನ್ನುವ ಪದ ಸಿಗುತ್ತದೆ. ಎಂಜೈಮುಗಳಿಗೂ ಕಿಣ್ವ ಎನ್ನುತ್ತಾರೆ. ಆದರೆ ಈ ಬಗ್ಗೆ ನನ್ನ ಮಡದಿಯ ಜೊತೆ ಚರ್ಚಿಸುವಾಗ, ಆಕೆ ಆಡುಮಾತಿನಲ್ಲಿ ಫರ್ಮೆಂಟೇಶನ್ನಿಗೆ, ಹುದುಗುವಿಕೆಗೆ ಬಳಸುವ ಮತ್ತೊಂದು ಪದದ ಬಗ್ಗೆ ತಿಳಿಸಿದಳು. ನಾನು ಕಿಣ್ವನ ಎನ್ನುವ ಪದವನ್ನು ಬಿಟ್ಟು, ಈ ಪದವನ್ನು ಬಳಸಿದೆ. ಇದರಿಂದಾಗಿ ಬಹಳಷ್ಟು ಜನ ಅದನ್ನು ಅರ್ಥ ಮಾಡಿಕೊಳ್ಳಬಹುದಾಯಿತು. ಪಾರಂಪರಿಕವಾಗಿ ಇಡ್ಲಿ, ದೋಸೆ, ಧೋಕ್ಲಾ ಮೊದಲಾದ ತಿನಿಸುಗಳನ್ನು ಮಾಡುವಾಗ ಹುದುಗುವಿಕೆಯನ್ನು ಬಳಸುತ್ತೇವೆ. ಹುದುಗುವಿಕೆ ಎಂದರೆ ಏನೆಂದು ಜನರಿಗೆ ತಿಳಿದಿದೆ. ಅದಕ್ಕಾಗಿ ಒಂದು ಪದವನ್ನೂ ಅವರು ಕಟ್ಟಿದ್ದಾರೆ. ಅದನ್ನೇ ಬಳಸಿದರೆ ತಪ್ಪೇನು?"

**ಕುತೂಹಲಿ:** *ನಿಮ್ಮ ಬರವಣಿಗೆಯ ವೃತ್ತಿಯಲ್ಲಿ ಆಹಾ ಎನಿಸಿದ ಕ್ಷಣವೊಂದಿತ್ತೇ? ನಿಮ್ಮ ನೆನಪಿನಲ್ಲಿ ಸದಾ ಹಸಿರಾಗಿರುವ ಒಂದು ಲೇಖನ ಅಥವಾ ಕಥೆ ಇದೆಯೇ?*

**ಬಾಳ ಫೋಂಡ್ಕೆ:** "ಇದೆ. ಆದನ್ನು ಜನಪ್ರಿಯ ವಿಜ್ಞಾನ ಎನ್ನಲಾರೆ. ಆದರೆ ಒಂದು ಕಡತ ಎನ್ನಬಹುದು. ವಿಷನ್ 2035 ಎನ್ನುವ ಒಂದು ಕೈಪಿಡಿಯನ್ನು ಬರೆಯುವುದರಲ್ಲಿ ನಾನು ಸೇರಿದ್ದೆ. ಅದು ಭವಿಷ್ಯವನ್ನು ಕಲ್ಪಿಸಿಕೊಳ್ಳುವ ಮತ್ತೊಂದು ಮಾರ್ಗವೆನ್ನಿ. ಆ ಕೆಲಸ ನನಗೆ ಬಹಳ ಖುಷಿ ಕೊಟ್ಟಿತು. ನಾನು ಬರೆದವುಗಳಲ್ಲಿ ಅದು ಗಮನಾರ್ಹ ಕೃತಿ ಎನ್ನಬಲ್ಲೆ.

"ನಾನು ಬರೆಯಲು ಆರಂಭಿಸಿ ಐವತ್ತು ವರ್ಷಗಳೇ ಆಗಿಬಿಟ್ಟಿವೆ.

ಇಷ್ಟರಲ್ಲಿ ಅತ್ಯಂತ ಪ್ರಭಾವಶಾಲಿ ಕೃತಿಗಳೆಂದು ಒಂದೆರಡನ್ನು ಹೆಕ್ಕುವುದು ಬಹಳ ಕಷ್ಟ. ಆದರೆ ನನಗೆ ಬಹಳ ಖುಷಿ ಕೊಟ್ಟ ಕೆಲಸ ಯಾವುದು ಎಂದು ಬೇಕಿದ್ದರೆ ಹೇಳಬಲ್ಲೆ. 2000ದ ಇಸವಿಯ ಆಸುಪಾಸಿನಲ್ಲಿ ನನ್ನ ಗೆಳೆಯರು ಕೆಲವರೊಟ್ಟಿಗೆ ಚರ್ಚಿಸುತ್ತಿದ್ದೆ. ಚರ್ಚೆಯ ವಿಷಯ, ಕಾಲ. ನಾನು ಕಾಲ ಎನ್ನುವುದು ಒಂದು ಸ್ವಾರಸ್ಯಕರ ಪರಿಕಲ್ಪನೆ, ಏಕೆಂದರೆ ಅದು ಕಾಲ ಎನ್ನುವುದು ಒಂದು ಮಾಪಕ. ಹಾಗೆಯೇ ಮಾಪನಕ್ಕೆ ಒಳಗಾಗುವ ವಿಷಯ ಕೂಡ ಎಂದಿದ್ದೆ. ಐನ್ ಸ್ಟೈನನ ಪ್ರಕಾರ ಅದೊಂದು ಆಯಾಮವೂ ಹೌದು. ಅದೊಂದು ಅಮೂರ್ತ ಪರಿಕಲ್ಪನೆಯೂ ಹೌದು. ಅದನ್ನು ನಾವು ಅಳೆಯಬಹುದೇನೋ ನಿಜ. ವಸ್ತುವನ್ನು ತೂಗುವಂತೆ, ಅವಕಾಶವನ್ನು ಅಳೆಯುವಂತೆ ಅದನ್ನೂ ಮಾಪಿಸಬಹುದು. ಆದರೆ ಇವೆರಡರಂತೆ ಕಾಲ ನಮ್ಮ ಸಂವೇದನೆಗೆ, ಅನುಭವಕ್ಕೆ ಸಿಗುವುದಿಲ್ಲ ಎಂದಿದ್ದೆ. ಕೂಟದಲ್ಲಿ ಪತ್ರಿಕೆಯೊಂದರ ಸಂಪಾದಕರೂ ಇದ್ದರು. ಕೂಟ ಮುಗಿದ ಮೇಲೆ ನಾನು ಚರ್ಚೆಯ ಬಗ್ಗೆ ಮರೆತೇ ಬಿಟ್ಟಿದ್ದೆ. ಆದರೆ ಮರುದಿನವೇ ಆ ಸಂಪಾದಕರು ಕರೆ ಮಾಡಿ, ಅವರ ಪತ್ರಿಕೆಯ ಸಾಪ್ತಾಹಿಕ ಪುರವಣಿಯಲ್ಲಿ ಮಕ್ಕಳಿಗೆಂದು ಕಾಲದ ಬಗ್ಗೆ ಸರಣಿ ಲೇಖನಗಳನ್ನು, ಅಂಕಣವನ್ನು, ಬರೆಯಬಹುದೇ ಎಂದು ವಿಚಾರಿಸಿದರು. ನಾನು ಹೌಹಾರಿಬಿಟ್ಟೆ. ಕಾಲ ಎನ್ನುವುದು ಒಂದು ಅಮೂರ್ತ ಕಲ್ಪನೆ. ಅದನ್ನು ಕಲಿತವರಿಗೆ ವಿವರಿಸುವುದೇ ಕಷ್ಟ. ಇನ್ನು ಮಕ್ಕಳಿಗೆ ಸಾಧ್ಯವೇ? ಇದೊಂದು ಸವಾಲು ಎನ್ನಿಸಿತು.

" ಒಂದು ರಾತ್ರಿ, ನಿದ್ರೆಯಲ್ಲಿ ಥಟ್ಟನೆ ಪರಿಹಾರ ಹೊಳೆಯಿತು. ವಿಕ್ರಮ–ಭೇತಾಳದ ಕಥೆಯಂತೆ ಇದನ್ನೂ ಹೇಳಿದರೆ ಹೇಗೆ? ವಿಕ್ರಮ–ಭೇತಾಳನ ಕಥೆಗಳೂ ನೀತಿಯಂತಹ ಅಮೂರ್ತ ಕಲ್ಪನೆಗಳನ್ನು ಕುರಿತ ಕಥೆಗಳಷ್ಟೆ. ಕಾಲದ ಬಗ್ಗೆ ಹೇಳುವುದಕ್ಕೆ ಅದನ್ನು ಬಳಸಬಾರದೇಕೆ? ಹೀಗೆ ಮಕ್ಕಳಿಗಾಗಿ ಇನ್ನೊಂದು ಅಂಕಣ ಆರಂಭಿಸಿದೆ. ಅವರಿಗಿಷ್ಟವಾಯಿತೋ ಇಲ್ಲವೋ. ನಾನಂತೂ ಬರೆಯುವುದನ್ನು ಖುಷಿ ಪಟ್ಟೆ. ಏಕೆಂದರೆ ಅದೊಂದು ದೊಡ್ಡ ಸವಾಲಾಗಿತ್ತು."

**ಕುತೂಹಲಿ:** *ದಶಕಗಳ ಕಾಲ ಬರೆದ ನಂತರ ನಿಮ್ಮ ಬರವಣಿಗೆಯ ಶೈಲಿಯಲ್ಲಿ ಏನಾದರೂ ಬದಲಾವಣೆ ಕಂಡಿದ್ದೀರೋ?*

**ಬಾಳ ಫೋಂಡ್ಕೆ:** "ನಿಜ. ನನ್ನದೇ ಒಂದು ಶೈಲಿ ಇತ್ತು. ನನ್ನ ಲೇಖನಗಳಲ್ಲಿ ಯಾವಾಗಲೂ ಆತ್ಮೀಯವಾದ, ಸಂಭಾಷಣೆಯ ಶೈಲಿ ಇರುತ್ತಿತ್ತು. ಆಡುಭಾಷೆಯ ಪದಗಳು ಹೆಚ್ಚಿರುತ್ತಿದ್ದುವು. ಇದು ಹೆಚ್ಚೆಚ್ಚು ಓದುಗರನ್ನು ತಟ್ಟಲು ಅನುಕೂಲಿ. ಇತ್ತೀಚೆಗೆ ನನ್ನ ಶೈಲಿಯಲ್ಲಿ ಸ್ವಲ್ಪ ವ್ಯತ್ಯಾಸವಾದಂತಿದೆ. ಇಂದಿನ ನನ್ನ ಬರೆಹಗಳು ಹೆಚ್ಚೆಚ್ಚು ಸಾಹಿತ್ಯಕ ಎನ್ನಿಸುತ್ತಿವೆ. ಪ್ರೌಢ ಓದುಗರಿಗಾಗಿ ಬರೆಯುತ್ತಿರುವಂತೆ ಅನಿಸುತ್ತದೆ. ಇದು ಯಾಕೆ ಹೀಗಾಯಿತೋ ನನಗೆ ಗೊತ್ತಿಲ್ಲ. ಆದರೆ ಅದು ಎದ್ದು ಕಾಣುತ್ತದೆ."

**ಕುತೂಹಲಿ:** *ವೈಜ್ಞಾನಿಕ ಕಥೆಗಳು ಹಾಗೂ ವಿಜ್ಞಾನ ಸಂವಹನದ ಭವಿಷ್ಯದ ಬಗ್ಗೆ ನಿಮ್ಮ ಅನಿಸಿಕೆಗಳೇನು?*

**ಬಾಳ ಫೋಂಡ್ಕೆ:** "ಭವಿಷ್ಯದಲ್ಲಿ ವಿಜ್ಞಾನ ಸಂವಹನ ಬಹಳ ಮುಖ್ಯವೆನಿಸುತ್ತದೆ ಎನ್ನುವುದು ನನ್ನ ಭಾವನೆ. ವಿಜ್ಞಾನ ಮತ್ತು ತಂತ್ರಜ್ಞಾನ ದಾಪುಗಾಲಿಡುತ್ತಲಿವೆ. ಇಂತಹ ಸಂದರ್ಭದಲ್ಲಿ ಜನರಿಗೆ ಅರಿವು ಮೂಡಿಸುವುದು, ಅವರನ್ನು ತಟ್ಟುವುದು ಬಹಳ ಮುಖ್ಯ. ಇತ್ತೀಚೆಗೆ ಕೋವಿಡ್ ಸಂದರ್ಭದಲ್ಲಿ ಇದರ ಅಗತ್ಯದ ಅನುಭವ ಗಾಢವಾಗಿ ಆಗಿತ್ತು. ಫಲವಾಗಿ ಈಗ ಹೆಚ್ಚೆಚ್ಚು ವಿಜ್ಞಾನಿಗಳು ಜನರನ್ನು ಮುಟ್ಟುವುದಕ್ಕೆ, ಅರಿವು ಮೂಡಿಸುವುದಕ್ಕೆ ಸಿದ್ಧರಾಗಿದ್ದಾರೆ. ಅವರಿಗೆ ಅದು ಮುಖ್ಯವೆನ್ನಿಸಿದೆಯೋ, ಅಥವಾ ವೃತ್ತಿಯಲ್ಲಿ ಏಳಿಗೆಗೆ ಅದು ಬೇಕು ಅಂತಲೋ. ಏನೇ ಇರಲಿ, ಹೀಗೊಂದು ಪರಿವರ್ತನೆ ಎದ್ದು ಕಾಣುತ್ತಿದೆ. ಹಿಂದೆ ವಿಜ್ಞಾನಿಗಳು ಜನಪ್ರಿಯ ವಿಜ್ಞಾನ ಲೇಖನವೆಂದರೆ ಮೂಗು ಮುರಿಯುತ್ತಿದ್ದುದುಂಟು. ಈಗ ಹಾಗಿಲ್ಲ. ಅದರಲ್ಲಿಯೂ ಭಾರತೀಯ ಭಾಷೆಗಳಲ್ಲಿ ವಿಜ್ಞಾನ ಸಂವಹನ ಮಾಡುವುದು ಬಲು ಮುಖ್ಯ ಎನ್ನುತ್ತಿದ್ದಾರೆ. ಇದು ಸಂತಸ ತರುವ ಬದಲಾವಣೆ. ಆಗಲೇ ಹೇಳಿದ ಹಾಗೆ, ಮರಾಠಿಯಲ್ಲಿ ಈಗಾಗಲೇ ಹೊಸ ಪೀಳಿಗೆಯ ವಿಜ್ಞಾನ ಕಥೆಗಾರರು ಹುಟ್ಟಿಕೊಂಡಿದ್ದಾರೆ. ಆದರೆ ಅಷ್ಟೇ ಸಾಲದು. ಇನ್ನೂ ಬೇಕು."

**ಕುತೂಹಲಿ:** *ನಿಜ ಸರ್. ಧನ್ಯವಾದಗಳು*

**ಬಾಳ ಫೋಂಡ್ಕೆ:** "ಧನ್ಯವಾದ"

**ಸಂದರ್ಶಕರು: ಕೊಳ್ಳೇಗಾಲ ಶರ್ಮ, ಸಂಪಾದಕ, ಕುತೂಹಲಿ.**

3ನೇ ಪುಟದಿಂದ

# ವೈಜ್ಞಾನಿಕ ಕಥೆಗಳ ಕೌತುಕಮಯ ಲೋಕ

ಹೆಸರಿಸಿರುವುದು, ಇನ್ನೊಂದು ಭರವಸೆಯ ವೈಜ್ಞಾನಿಕ ಕಥೆ ಬರೆಯಲು ಪ್ರೇರಣೆ ಎನ್ನಬೇಕು. ನಮ್ಮ ತಾಯಿನಾಡು ಎಲ್ಲ ಕ್ಷೇತ್ರಗಳಲ್ಲಿಯೂ ಜಗತ್ತಿನಲ್ಲಿ ಮುಂದಾಳಾಗಿರಲಿ ಎಂದು ಎಲ್ಲರೂ ಶ್ರಮಿಸುತ್ತಿದ್ದೇವಷ್ಟೆ. ಹಿಂದಿ ಮತ್ತು ಇಂಗ್ಲೀಷಿನಲ್ಲಿ ಪ್ರಕಟವಾಗುವ ನಮ್ಮ ಪ್ರಮುಖ ಪ್ರಕಟಣೆಯ ಹೆಸರೂ ಡ್ರೀಮ್ 2047 ಎಂದಿರುವುದು ಕಾಕತಾಳೀಯವಷ್ಟೆ. ವಿಜ್ಞಾನ ಪ್ರಸಾರ್ ಸಂಸ್ಥೆಯನ್ನು ಸ್ಥಾಪಿಸಿದ ಪ್ರೊಫೆಸರ್ ನರೇಂದ್ರ ಕೆ ಸೆಹಗಲ್ ಅವರ ದೂರದರ್ಶಿತ್ವದ ಕೃಪೆಯಿಂದಾಗಿ ಈ ಮಾಸಪತ್ರಿಕೆಗಳಿಗೆ ಈ ಹೆಸರು ಸಂದಿದೆ.

ಚಲನಚಿತ್ರಗಳು, ಧಾರಾವಾಹಿಗಳಲ್ಲದೆ, ವೈಜ್ಞಾನಿಕ ಕಥೆಗಳನ್ನು ಆಧರಿಸಿದ ಜನಪ್ರಿಯ ನಾಟಕಗಳೂ ಸಾಕಷ್ಟು ಪ್ರಸಿದ್ಧಿಯಾಗಿವೆ. ವಿಜ್ಞಾನ ಪ್ರಸಾರದಲ್ಲಿರುವ ನಾವು, ಈ ವರ್ಷದ ಕೊನೆಯಲ್ಲಿ ಒಂದು ರಾಷ್ಟ್ರೀಯ ವಿಜ್ಞಾನ ನಾಟಕೋತ್ಸವವನ್ನು ನಿಮ್ಮ ಮುಂದೆ ತರಲಿದ್ದೇವೆ. ಇದು ವಿವಿಧ ಭಾರತೀಯ ಭಾಷೆಗಳಲ್ಲಿ ದೊರೆಯುವ ವಿಜ್ಞಾನ ನಾಟಕಗಳನ್ನು ಪ್ರದರ್ಶಿಸುವುದು. ಕಾದು ನೋಡಿ.

ಇಂದು ನಮ್ಮ ನಡುವೆ ಹಲವರು ಜನಪ್ರಿಯ ವೈಜ್ಞಾನಿಕ ಕಥೆಗಾರರು ಇದ್ದಾರೆನ್ನುವುದು ಅದೃಷ್ಟವೇ ಸರಿ. ಅವರುಗಳಲ್ಲಿ ಇಂಗ್ಲೀಷು ಮತ್ತು ಮರಾಠಿ ಲೇಖಕ ಡಾ. ಬಾಳ ಫೋಂಡ್ಕೆ, ಹಿಂದಿ ಲೇಖಕ ಶ್ರೀ ದೇವೇಂದ್ರ ಮೇವಾಡಿ, ಕನ್ನಡತಿ ಡಾ. ಶಾಂತಲಾರನ್ನು ಸಂದರ್ಶಿಸಿ, ವೈಜ್ಞಾನಿಕ ಕಥೆಗಳ ಬಗ್ಗೆ ಅವರ ಅಭಿಪ್ರಾಯಗಳನ್ನೂ, 2047ರಲ್ಲಿ ಈ ಕ್ಷೇತ್ರ ಹೇಗಿರಬಹುದೆನ್ನುವ ಬಗ್ಗೆಯೂ ವಿಚಾರ ಮಾಡಿದ್ದೇವೆ. ಶ್ರೀ ಕೊಳ್ಳೇಗಾಲ ಶರ್ಮ ಹಾಗೂ ಶ್ರೀ ನಿಮೀಷ್ ಕಪೂರ್ ಅವರ ಪರಿಶ್ರಮದಿಂದ ಈ ವೈಜ್ಞಾನಿಕ ಕಥೆಗಳ ವಿಶೇಷ ಸಂಚಿಕೆಯನ್ನು ರೂಪಿಸುವುದು ಸಾಧ್ಯವಾಯಿತು. ಅಂದ ಹಾಗೆ ಒಳ್ಳೆಯ ಸುದ್ದಿಗಳಿಗೆ ಬರವಿಲ್ಲ. ನಾವೀಗ ಒಡಿಯಾ ಭಾಷೆಯಲ್ಲಿಯೂ ವಿಜ್ಞಾನ ಸಂವಹನ, ಜನಪ್ರಿಯ ವಿಜ್ಞಾನ ಹಾಗೂ ವಿಸ್ತರಣೆಯ ಯೋಜನೆಯನ್ನು ಆರಂಭಿಸಿದ್ದಾಯಿತು. ಶೀಘ್ರವೇ ಮಲಯಾಳಂ ಮತ್ತು ನೇಪಾಳಿ ಭಾಷೆಗಳಲ್ಲಿಯೂ ಈ ಯೋಜನೆ ಆರಂಭವಾಗಲಿದೆ. ಆರಂಭದಲ್ಲಿ ಹೇಳಿದ ಹಾಗೆ ನಾವೆಲ್ಲರೂ ಜೀನ್ ರಾಡನ್‌ಬೆರ್ರಿಗೆ ಸ್ಟಾರ್ ಟ್ರೆಕ್ಕಿನಂತಹ ವೈಜ್ಞಾನಿಕ ಕಥೆಯನ್ನು ಚಿತ್ರೀಕರಿಸಿದ್ದಕ್ಕೆ ಕೃತಜ್ಞರಾಗಿರಬೇಕು. ವೈಜ್ಞಾನಿಕ ಕಥೆಗಳ ಲೋಕದಲ್ಲಿ ವಿಹರಿಸಿ. ಕಲ್ಪನಾಲೋಕವನ್ನು ಆನಂದಿಸಿ.



ಕತೆ

# ನವೋದಯ

ಕುಂಚವನ್ನು ಬಿಸಾಡಿದ್ದ ಮುದಿ ಕಲೆಗಾರ ಹೊಸ ಶೈಲಿಯನ್ನು ಸೃಷ್ಟಿಸಿದ್ದಾರೂ ಹೇಗೆ? ಆ ಪ್ರತಿಭೆಗೆ ಕಾರಣವೇನು?

ಬಾಳ ಫೋಂಡ್ಕೆ

ಚಿತ್ರಗಳು: ಡಿ. ಕೆ. ರಮೇಶ್

ಸಭಾಂಗಣದಲ್ಲಿ ಪ್ರತಿಧ್ವನಿಸಿದ ಕರತಾಡನ ಮಾಧವರಾಯರನ್ನು ಎಚ್ಚರಿಸಿತು. ಸುತ್ತಲೂ ನೋಡಿದಾಗ, ಅಲ್ಲಿದ್ದ ಪ್ರತಿಯೊಬ್ಬ ವೀಕ್ಷಕನೂ ಅವನತ್ತಲೇ ನೋಡುತ್ತಿದ್ದ. ವೇದಿಕೆಯ ಮೇಲಿದ್ದವರೂ ಅವನತ್ತಲೇ ದೃಷ್ಟಿ ನೆಟ್ಟಿದ್ದರು. ಭಾಷಣಕಾರರೂ ಅಷ್ಟೇ. ಮಾಧವರಾಯರಿಗೆ ಮುಜುಗರವೆನ್ನಿಸಿತು. ಕುಳಿತಲ್ಲೇ ಮಿಸುಕಾಡಿದರು. ಕಾಲುಗಳನ್ನು ಅತ್ತಿತ್ತ ಹಾಕಿ ಆರಾಮವಾಗಿರಲು ಪ್ರಯತ್ನಿಸಿದರೂ, ಆಗಲಿಲ್ಲ.

ಇದ್ದಕ್ಕಿದ್ದ ಹಾಗೆ ಈ ಚಪ್ಪಾಳೆಗೆ ಕಾರಣವೇನೆಂಬುದು ಅವನಿಗೆ ತಿಳಿಯಲಿಲ್ಲ. ಏಕೆ ಚಪ್ಪಾಳೆ? ಭಾಷಣಕಾರರು ಏನು ಹೇಳುತ್ತಿದ್ದರು? ನನ್ನ ಬಗ್ಗೆಯೇ ಏನಾದರೂ ಹೇಳುತ್ತಿದ್ದರೋ? ತನ್ನತ್ತಲೇ ನೋಡುತ್ತಿದ್ದವರ ಮುಖದಲ್ಲಿ ಹಲವು ನಿರೀಕ್ಷೆಗಳಿದ್ದುದನ್ನು ಆತ ಕಂಡ. ನನ್ನಿಂದ ಏನನ್ನು ನಿರೀಕ್ಷಿಸುತ್ತಿದ್ದಾರೋ? ನಾನು ಸುಮ್ಮನೆ ಕುಳಿತಿದ್ದುದಕ್ಕೆ ಹೀಗೋ? ಅಥವಾ ಏನೂ ಹೇಳದೇ ಇದ್ದುದಕ್ಕೋ? ಗಿರಿಗಿಟ್ಟಲೆಯಂತೆ ಹಲವಾರು ಸಂದೇಹಗಳು ಅವನ ಮನಸ್ಸಿನಲ್ಲಿ ಓಡಿದುವು. ಹೀಗಾಗುತ್ತದೆಂದು ಊಹಿಸಿದ್ದ. ಖಂಡಿತವಾಗಿ ಆಗುತ್ತದೆಂದು ತಿಳಿದಿತ್ತು. ಅದಕ್ಕೇ ಈ ಸನ್ಮಾನವೇ ಬೇಡ ಎಂದೂ ಹೇಳಿದ್ದ. ಜನ ತನ್ನ ಮೇಲೆ ಹೀಗೆ ಅಭಿನಂದನೆಯ ಮಳೆ ಸುರಿಸುವುದು ಅವನಿಗೆ ಬೇಕಿರಲಿಲ್ಲ. ಅವರು ಹೇಳಿದ್ದನ್ನೆಲ್ಲ ಕಣ್ಣೆವೆ ಅಲ್ಲಾಡಿಸದೆ ಕೇಳುವ ಕಷ್ಟವೂ ಬೇಕಿರಲಿಲ್ಲ. ಆತ ಅಷ್ಟೊಂದು ದಪ್ಪ ಚರ್ಮದವನಲ್ಲ. ಖಾಸಗಿಯಾಗಲಿ, ಸಾರ್ವಜನಿಕವಾಗಿಯಾಗಲಿ ಯಾರಾದರೂ ಹೊಗಳಿದರೆ ಆತನಿಗೆ ಕಸಿವಿಸಿ ಎನಿಸುತ್ತಿತ್ತು. ಎಲ್ಲರ ಮುಂದೆ ಹೊಗಳಿದರಂತೂ ತಡೆಯಲಾಗುತ್ತಿರಲಿಲ್ಲ. ಅಂತಹ ಸಂದರ್ಭಗಳಲ್ಲೆಲ್ಲ ಹೆಮ್ಮೆ ಪಡುವುದರ ಬದಲಿಗೆ ತಾನೇನೋ ದೊಡ್ಡ ತಪ್ಪು ಮಾಡಿದ್ದೇನೆಂಬ ಸಂದೇಹವೇ ಆತನನ್ನು ಕಾಡುತ್ತಿತ್ತು.

ಯಾವುದೇ ವ್ಯಕ್ತಿಗೂ ಇಷ್ಟೊಂದು ಮಹತ್ವವನ್ನು ಏಕಾದರೂ ಕೊಡುತ್ತಾರೋ? ಅವನಿಗೆ ಅರ್ಥವೇ ಆಗುತ್ತಿರಲಿಲ್ಲ. ಯಾರೂ ಅಮರರಲ್ಲವಷ್ಟೆ. ಅಮರವೆಂದೇನಾದರೂ ಇದ್ದರೆ ಅದು ಅವನ ಕೃತಿಗಳು ಮಾತ್ರ. ಅವನಂತಹ ಕಲೆಗಾರರ ಬದುಕಿನಲ್ಲ ಅವರ ಕಲೆಯೇ ಶಾಶ್ವತ. ಅಮರ. ಕಲೆಗಾರ ಯಾರೇ ಆಗಿರಲಿ, ಅವನ ಅಥವಾ ಅವಳ ಕಲೆಯ ಬಗ್ಗೆಯಷ್ಟೆ ಚರ್ಚೆ, ಹೊಗಳಿಕೆ, ಹೀಗಳಿಕೆ ಇರಬೇಕೇ ಹೊರತು ವ್ಯಕ್ತಿಯ ಕುರಿತಲ್ಲ. ಅದುವೇ ಅವನ ಜೀವನದೃಷ್ಟಿಯಾಗಿತ್ತು.

**ಯಾವುದೇ ವ್ಯಕ್ತಿಗೂ ಇಷ್ಟೊಂದು ಮಹತ್ವವನ್ನು ಏಕಾದರೂ ಕೊಡುತ್ತಾರೋ? ಅವನಿಗೆ ಅರ್ಥವೇ ಆಗುತ್ತಿರಲಿಲ್ಲ. ಯಾರೂ ಅಮರರಲ್ಲವಷ್ಟೆ. ಅಮರವೆಂದೇನಾದರೂ ಇದ್ದರೆ ಅದು ಅವನ ಕೃತಿಗಳು ಮಾತ್ರ.**

ಆದ್ದರಿಂದಲೇ ಇದುವರೆವಿಗೂ ಆತ ಚಚ್ಚರದಿಂದ ಪ್ರಚಾರದಿಂದ ದೂರವೇ ಉಳಿದಿದ್ದ. ತನ್ನ ಕಲಾಕೃತಿಗಳನ್ನು ಕೇವಲ ಜನರು ನೋಡಲೆಂದು ಪ್ರದರ್ಶಿಸುತ್ತಿದ್ದನಷ್ಟೆ. ಅವುಗಳ ಬಗೆಗಿನ ವಿಮರ್ಶೆಗಳನ್ನು ಓದಿದ್ದೂ ಇಲ್ಲ. ಆ ಆಸಕ್ತಿ ಇರಲೂ ಇಲ್ಲ.

ಆತ ಚಿತ್ರಗಳನ್ನು ತನ್ನ ಆತ್ಮ ತೃಪ್ತಿಗೋಸ್ಕರವಾಗಿ ರಚಿಸುತ್ತಿದ್ದ. ತನ್ನ ಆತ್ಮ ಬೇಡಿದ್ದನ್ನಷ್ಟೆ ರಚಿಸಿದ್ದೇನೆ ಎನ್ನುತ್ತಿದ್ದ. ಅವನೊಳಗಿನ ತುಮುಲಗಳನ್ನು ತೆರೆದಿಡಲು ಅದೊಂದೇ ಮಾರ್ಗವಿದ್ದಿದ್ದು. ಬೇರೆಯವರಿಗೆ ಅದನ್ನು ಹೇಗೆ ನೋಡುತ್ತಾರೆನ್ನುವುದರಲ್ಲಿ ಅವನಿಗೆ ಆಸಕ್ತಿ ಇರಲಿಲ್ಲ. ಹೀಗಾಗಿಯೇ ಹಲವಾರು ಕಲಾವಿದ ಸಂಘಟನೆಗಳಲ್ಲಿ ಅಧಿಕಾರಿಯಾಗೆಂದು ಆಹ್ವಾನ ಬಂದಾಗಲೂ ಯಾವುದೇ ಆಸಕ್ತಿ ತೋರಿರಲಿಲ್ಲ. ಚಂದಾ ಪಾವತಿಸುವ ಸಾಮಾನ್ಯ ಸದಸ್ಯನಾಗಿಯೇ ಇರುತ್ತಿದ್ದ. ಸದಸ್ಯನಾಗಿದ್ದರಿಂದ ಯಾವುದಾದರೂ ಕಾರ್ಯಕ್ರಮಗಳಿದ್ದರೆ ಭಾಗವಹಿಸುತ್ತಿದ್ದ. ಕೊನೆಯ ಸಾಲಿನಲ್ಲಿ ಕುಳಿತು, ಯಾರಿಗೂ ಗೊತ್ತಾಗದ ಹಾಗೆ ಹೊರಗೆ ಹೋಗಿಬಿಡುತ್ತಿದ್ದ. ಆತ ಬಂದಿದ್ದೂ, ಹೋಗಿದ್ದೂ ಯಾರಿಗೂ ಗೊತ್ತಾಗುತ್ತಿರಲಿಲ್ಲ. ಆತ ಇದ್ದಿದ್ದೂ ಯಾರಿಗೂ ತಿಳಿಯುತ್ತಿರಲಿಲ್ಲ.

ಆದರೆ ಈ ದಿನದ ಸನ್ಮಾನ ಸಮಾರಂಭವನ್ನು ತಪ್ಪಿಸಿಕೊಳ್ಳಲು ಆಗಿರಲಿಲ್ಲ. ಸಂಕೋಚ ಸ್ವಭಾವದವನಾದ ಆತ ಯಾರ ಭಾವನೆಯನ್ನೂ ನೋಯಿಸುತ್ತಿರಲಿಲ್ಲ. ಅದೇ ಕಾರಣಕ್ಕೆ, ಅವನ ನಿಕಟ ಸಂಬಂಧಿಗಳೂ, ಮಿತ್ರರೂ ಈ ಸನ್ಮಾನ ಸಮಾರಂಭದ ವಿಷಯ ಎತ್ತಿದಾಗ, ಇಲ್ಲ ಎನ್ನುವ ಧೈರ್ಯ ಬಂದಿರಲಿಲ್ಲ. ಅದನ್ನು ಕೈಬಿಡುವಂತೆ ಅವರಿಗೆ ತಿಳಿ ಹೇಳಲು ಪ್ರಯತ್ನಿಸಿದ್ದನಾದರೂ, ಅವರು ಒತ್ತಾಯಿಸಿದಾಗ ಒಪ್ಪಿಕೊಳ್ಳಲೇ ಬೇಕಾಗಿತ್ತು. ಲಲಿತಕಲಾ ಅಕಾಡೆಮಿಯ ಫೆಲೊಶಿಪ್ ಎಂದರೆ ಸಣ್ಣ ಪುಟ್ಟ ಗೌರವವೇನಲ್ಲವಲ್ಲ? ಯಾರೆಂದರೆ ಅವರಿಗೆ ಅದು ಸಿಗುವುದಿಲ್ಲವಷ್ಟೆ. ಅವನ ಆರಾಧಕರು ಈ ಸಂದರ್ಭವನ್ನು ಕೊಂಡಾಡಲು ಸನ್ಮಾನ ಸಮಾರಂಭವನ್ನು ಆಯೋಜಿಸಲು ಹೊರಟಾಗ ಮನಸ್ಸಿಲ್ಲದ ಮನಸ್ಸಿನಿಂದ ಒಪ್ಪಿಗೆ ನೀಡಿದ್ದ.

ಒಪ್ಪಿಗೆ ನೀಡುವಾಗಲೂ ಸಮಾರಂಭ ಸರಳವಾಗಿರಲಿ, ಚೊಕ್ಕವಾಗಿರಲಿ. ಆಡಂಬರ, ಪ್ರಚಾರ ಇಲ್ಲದಿರಲಿ ಎಂದು ಒತ್ತಾಯಿಸುವುದನ್ನು ಮರೆತಿರಲಿಲ್ಲ. ಅದು ವಿಧ್ಯುಕ್ತವಲ್ಲದ ಕೆಲವೇ ಮಿತ್ರರು ಒಟ್ಟಾದಂತಹ ಸಮಾರಂಭವಾಗಿದ್ದರೆ ಖುಷಿ ಇರುತ್ತಿತ್ತು. ಆದರೆ ಅವನ ಆರಾಧಕರು ಬಿಡಬೇಕಲ್ಲ? ಅವನಿಗೂ ಸಾಕಷ್ಟು ಆರಾಧಕರಿದ್ದರು. ದೀರ್ಘ ಕಾಲದಿಂದ ತಾವು ಮೆಚ್ಚುತ್ತಾ ಬಂದಿದ್ದ ಕಲಾಚಿತ್ರಗಳನ್ನು ರಚಿಸಿದ ಕಲಾವಿದನನ್ನು ನೇರವಾಗಿ ಕಾಣುವ ಈ ಸುಸಂದರ್ಭವನ್ನು ಕಳೆದುಕೊಳ್ಳಲು ಅವರೂ ತಯಾರಿರಲಿಲ್ಲ. ಅವನನ್ನು ಕಾಣುವ, ಅವನ ಮೇರುಕೃತಿಗಳು ಹುಟ್ಟಿದ ಬಗ್ಗೆ ಅವನ ಮಾತುಗಳಲ್ಲೇ ಕೇಳುವ ಅವಕಾಶ ಇದಾಗಿತ್ತು. ಲಕ್ಷದಲ್ಲೊಂದು ಅವಕಾಶವೆನ್ನಿ. ಸಹಜವಾಗಿಯೇ ಆಯೋಜಕರ ನಿರೀಕ್ಷೆಯನ್ನೂ ಮೀರಿ ಸಭಾಂಗಣದಲ್ಲಿ ಸಭಿಕರು ಕಿಕ್ಕಿರಿದಿದ್ದರು.

ಅವನು ಮುಂದಿನ ಸಾಲಿನಲ್ಲಿ ಕುಳಿತುಕೊಳ್ಳಲು ಇದೇ ಕಾರಣ. ಆ ಜನಜಂಗುಳಿ. ತೊಟ್ಟ ದಿರಿಸಿನ ಕೆಂಪನ್ನೂ ನಾಚಿಸುವಂತೆ ಕೆನ್ನೆಗೆಂಪಾದ ನವವಧುವಿನಂತೆ ಸಂಕೋಚದಿಂದಲೇ ಅಲ್ಲಿ ಕುಳಿತಿದ್ದ.

“ಕಳೆದ ನಲವತ್ತು ವರ್ಷಗಳಿಂದಲೂ ಮಾಧವರಾಯರು ತಮ್ಮ ಕಲಾಯಜ್ಞದಲ್ಲಿ, ಕ್ಷಣವೂ ವಿರಾಮವಿಲ್ಲದೆ ತೊಡಗಿಕೊಂಡಿದ್ದಾರೆ.”, ಎಂದು ನುಡಿದ ಭಾಷಣಕಾರ ಕ್ಷಣ ಹೊತ್ತು ತಡೆದ. ನಂತರ ಮೊದಲಿನ ಉದ್ವೇಗದಿಂದಲೇ ಮುಂದುವರೆಸಿದ. “ಇವರು ಮೊತ್ತಮೊದಲು 1990ರ ದಶಕದಲ್ಲಿ ಇವರು ಪ್ರಕಾಶಕ್ಕೆ ಬಂದರು ಅವರ ರಚನೆ ಅಭಿಸಾರಿಕಾ ಈಗಲೂ ಕಲಾರಸಿಕರನ್ನು ಆಕರ್ಷಿಸಿ, ಮೋಡಿ ಮಾಡುತ್ತಿದೆ. ಲಿಯೊನಾರ್ದೊ ಡಾ ವಿಂಚಿಯ ಮೋನಾಲೀಸಾ ಕೃತಿಯಂತೆಯೇ ಅಭಿಸಾರಿಕಾ ಕೂಡ ಜನಪ್ರಿಯತೆ ಪಡೆದಿದೆ.”

ತಾನು ಅಲ್ಲಿಂದ ಮಾಯವಾಗಿಬಿಡಬಾರದೇ ಎಂದು ಮಾಧವರಾಯರು ಹಂಬಲಿಸಿದರು. ಭಾಷಣಕಾರರ ಉತ್ಪ್ರೇಕ್ಷೆಯ ಮಾತುಗಳು ಕಿರಿಕಿರಿ ಎನ್ನಿಸಿದುವು. ಲಿಯೊನಾರ್ದೊ ಡಾ ವಿಂಚಿಗೂ, ನನಗೂ ಹೋಲಿಕೆಯೇ? ಆದರೆ ಅಭಿಸಾರಿಕೆಯನ್ನು ಚಿತ್ರಿಸುವಾಗ ತನ್ನ ಕಲೆ ಮೇರುಮಟ್ಟದಲ್ಲಿತ್ತೆಂದು ಅವನ ಅಂತಃಸ್ಸಾಕ್ಷಿ ಹೇಳುತ್ತಿತ್ತು. ಆ ಕಾಲದಲ್ಲಿ ಲಿಯೊನಾರ್ದೊ ಜೊತೆಗೆ ಹೀಗೆ ಯಾರಾದರೂ ಹೋಲಿಸಿದ್ದರೆ ಬಹುಶಃ ತಾನು ಅಲ್ಲಗಳೆಯುತ್ತಿರಲಿಲ್ಲ.

ಅಭಿಸಾರಿಕಾದ ಉಲ್ಲೇಖ ಆತನ ಮನಸ್ಸಿನಲ್ಲಿ ಅಡಗಿದ್ದ ನೆನಪುಗಳನ್ನು ಹೊರತಂದಿತು. ಆಗ ತನ್ನ ಮನಸ್ಸಿನಲ್ಲಿ ಎಷ್ಟೊಂದು ಹೊಸ, ಹೊಸ ವಿಚಾರಗಳು, ಕಲ್ಪನೆಗಳು ನೆರೆದಿದ್ದುವು!

ಹೊಸ ಪ್ರಯೋಗಗಳನ್ನು ಮಾಡುವ ಹುರುಪು ಹೇಗೆ ಜ್ವಲಿಸುತ್ತಿತ್ತು! ಅಭಿಸಾರಿಕಾ ಎನ್ನುವ ಚಿತ್ರ ಸಂಪೂರ್ಣವಾಗಿ ತನ್ನ ಕಲ್ಪನೆಯಿಂದಲೇ ಮೂಡಿದ್ದು ಎನ್ನುವುದನ್ನು ಯಾರೂ ಒಪ್ಪುತ್ತಿರಲಿಲ್ಲ. ಅಭಿಸಾರಿಕಾ ಚಿತ್ರದ ಮಾಡಲ್ ಯಾರಿರಬಹುದು ಎಂದು ಎಲ್ಲರೂ ಊಹಿಸಲು ಪ್ರಯತ್ನಿಸಿದ್ದರು. ಹಾಗೆ ಅವರು ಊಹಿಸಿದವರಿಗೆ ಸ್ವಲ್ಪ ಖುಷಿಯಾಗಿತ್ತೇನೋ, ಆದರೆ ಮಾಧವರಾಯರಿಗೆ ನೋವಾಗಿತ್ತು.

ಆ ಮಟ್ಟಿಗೆ ಮೋನಾಲಿಸಾ ಜೊತೆ ತಾಳೆಯಾಗುತ್ತದೆ ಎನ್ನಿಸಿ ರಾಯರ ಮುಖದ ಮೇಲೆ ಲಾ ಗ್ಯಾಕೊಂಡಾದಲ್ಲಿ ಕಾಣುವಂತೆಯೇ ನಸುನಗೆ ಕಾಣಿಸಿತು. ಆದರೆ ಕ್ಷಣ ಮಾತ್ರ ಕಾಣಿಸಿಕೊಂಡ ನಗು ಮಾಯವಾಯಿತು. ಏಕೆಂದರೆ ಮರು ಕ್ಷಣದಲ್ಲಿಯೇ ಅವರಿಗೆ ಅದರೊಟ್ಟಿಗಿನ ಖೇದಕರ ಬೆಳವಣಿಗೆಗಳೂ ನೆನಪಾದುವು. ಇಲ್ಲಿ ಎಷ್ಟು ಮಂದಿಗೆ ಅಭಿಸಾರಿಕಾ ಹಲವಾರು ತಿಂಗಳುಗಳಿಂದ ಪೂರ್ಣವಾಗದೆಯೇ ಇದೆ ಎನ್ನುವುದು ತಿಳಿದಿದೆ?

ಅವರು ಕಲ್ಪಿಸಿಕೊಂಡ ಕ್ಷಣದಿಂದ ಅಭಿಸಾರಿಕಾದ ಬೆಳವಣಿಗೆ ಚೆನ್ನಾಗಿಯೇ ಇತ್ತು. ಆದರೆ ಅದಿನ್ನೇನು ಪ್ರೌಢಿಮೆಯನ್ನು ಮುಟ್ಟಲಿದೆ ಎನ್ನುವಷ್ಟರಲ್ಲಿ ಮಾಧವರಾಯರಿಗೆ ಕುಂಚವನ್ನು ಹಿಡಿದ ತಮ್ಮ ಕೈ,ತೆ ವರ್ತಿಸ ತೊಡಗಿತ್ತು. ಆತ ಹೇಳಿದ ಹಾಗೆ ಕುಂಚದಿಂದ ಬಣ್ಣ ಬಳೆಯುತ್ತಿರಲಿಲ್ಲ. ನೇರವಾದೊಂದು ರೇಖೆ ಎಳೆಯಲು ಹೇಳಿದಾಗೆಲ್ಲ ಅದು ಇದ್ದಕ್ಕಿದ್ದ ಹಾಗೆಯೇ ವಕ್ರಹಾದಿಯಲ್ಲಿ ಸಾಗಿ ಅನಪೇಕ್ಷಿತವಾದೊಂದು ಕಡೆ ನಿಂತುಬಿಡುತ್ತಿತ್ತು. ಬೇರೆ ಕಾಲದಲ್ಲಾಗಿದ್ದರೆ ಮಾಧವರಾಯರು ಯಾರೋ ಮಾಟ ಮಾಡಿರಬೇಕು ಎಂದು ಮಾಂತ್ರಿಕ ಬಳಿಗೋ, ಮಾಟಮಂತ್ರದವರ ಬಳಿಗೋ ಹೋಗುತ್ತಿದ್ದರೇನೋ?

ಆದರೆ ಇದು ಇಪ್ಪತ್ತೊಂದನೆಯ ಶತಮಾನ. ಜೊತೆಗೆ ಮಾಧವರಾಯರು ವಿಚಾರವಾದಿಗಳೂ ಆಗಿದ್ದರಲ್ಲ! ಆತ ಕೊನೆಗೆ ವೈದ್ಯರೊಬ್ಬರ ಬಳಿ ಹೋದರು. ವೈದ್ಯರಿಗೂ ಇದು ವಿಚಿತ್ರವೆನ್ನಿಸಿತು. ಆತ ಇನ್ನಷ್ಟು ವಿಶೇಷಜ್ಞರ ಸಲಹೆ ಪಡೆದರು. ಬೇರೆ ವೈದ್ಯರನ್ನೂ ಕರೆಸಿ ತೋರಿಸಿದರು. ಕೊನೆಗೊಬ್ಬ ನರವೈದ್ಯರು ಅದಕ್ಕೆ ಕಾರಣವನ್ನು ಪತ್ತೆ ಮಾಡಿದರು. ಮಾಧವರಾಯರ ಮಿದುಳಿನ ಕೆಲವು ನರಕೋಶಗಳು ಸಾಯಲು ತೊಡಗಿದ್ದುವು. ಅವರ ಕೈಯಲ್ಲಿದ್ದ ಕುಂಚದಲ್ಲಿನ ಕೆಲವು ರೋಮಗಳು ಕಾಲ ಕಳೆದಂತೆ ಉದುರುತ್ತವಲ್ಲ, ಹಾಗೆ.



"ಅಂದರೆ ಅಲ್ಲಿ ಗೆಡ್ಡೆ ಬೆಳೆಯುತ್ತಿದೆಯೇ?" ತಣ್ಣನೆಯ ನಿರ್ಭಾವುಕತೆಯಿಂದ ವೈದ್ಯರನ್ನು ಪ್ರಶ್ನಿಸಿದ್ದ. ಹಾಗೆ ಕೇಳಿದ್ದಕ್ಕೆ ಅವನಿಗೇ ಅಚ್ಚರಿಯೂ ಆಗಿತ್ತು.

"ಅಲ್ಲಲ್ಲ. ಹಾಗಲ್ಲ. ಜೀವಕೋಶಗಳು ಬೇಕಾಬಿಟ್ಟಿ ಬೆಳೆಯುವುದರಿಂದ ಗೆಡ್ಡೆ ಬೆಳೆಯುತ್ತದೆ. ಇಲ್ಲಿ ಹಾಗಲ್ಲ. ನಿಮ್ಮ ಮಿದುಳಿನಲ್ಲಿ ಕಲಾವಂತಿಕೆಗೆ ಕಾರಣವಾದ ಭಾಗದಲ್ಲಿನ ನರಕೋಶಗಳು ಮಾತ್ರ ನಶಿಸುತ್ತಿವೆ." ಎಂದರು.

"ಅಂದರೆ ಅದು ಪಾರ್ಕಿನ್ಸೋನಿಸಮ್ಮೋ, ಅಥವಾ ಆಲ್ಜೀಮರನ ಖಾಯಿಲೆಯೋ?"

"ಎರಡೂ ಅಲ್ಲ. ಆದರೆ ಅದರಂತೆಯೇ ಎನ್ನಬಹುದು. ಇದಕ್ಕೆ ಇನ್ನೂ ಹೆಸರಿಟ್ಟಿಲ್ಲ. ಏಕೆಂದರೆ ನಿಮ್ಮ ಕೇಸೇ ಮೊದಲನೆಯದು. ವೈದ್ಯ ಸಾಹಿತ್ಯದಲ್ಲಿಯೂ ಇಂತಹ ಯಾವುದೇ ಕೇಸು ನಮೂದಾಗಿದ್ದನ್ನು ನಾನು ಕಾಣಲಿಲ್ಲ. ಅದಕ್ಕೇ "

"..ಅದಕ್ಕೇ ಅಂದರೆ ಏನು ಡಾಕ್ಟರ್?"

"ಒಂದು ಸಲಹೆ ಕೊಡಬೇಕೆಂದಿದ್ದೇನೆ. ನೀವು ಅನ್ಯಥಾ ಭಾವಿಸಬಾರದು. ನಾನು ಇನ್ನೂ ಒಂದಿಷ್ಟು ಪರೀಕ್ಷೆಗಳನ್ನು ಮಾಡಬೇಕೆಂದಿದ್ದೇನೆ. ಇನ್ನೊಂದೆರಡು ಸಿಟಿ ಸ್ಕ್ಯಾನು. ಹಾಗೆಯೇ ಬೇರೆಡೆ ಇರುವ ಪರಿಣತರ ಸಲಹೆಯನ್ನೂ ಪಡೆಯುತ್ತೇನೆ. ವಿದೇಶೀಯರ ಸಲಹೆಯನ್ನೂ ಕೂಡ. ಈ ನಿಮ್ಮ ಖಾಯಿಲೆ ಈಗಷ್ಟೆ ಆರಂಭವಾಗಿದೆ ಅಂತ ನನಗೆ ಅನಿಸುತ್ತಿದೆ "

"ಓಹ್. ಹಾಗಿದ್ದರೆ ಇದು ಇನ್ನೂ ಕೆಟ್ಟದಾಗಲಿದೆ ಎನ್ನಿ! ನನಗಿಚ್ಛೆ ಬಂದ ಹಾಗೆ ಕುಂಚವಾಡಿಸಲು ಸಾಧ್ಯವಾಗುವುದಿಲ್ಲ ಅಲ್ಲವೇ? ನನ್ನ ಚಿಂತನೆಗಳನ್ನು ಚಿತ್ರಗಳ ಮೂಲಕ ಹೇಳಲಾಗುವುದಿಲ್ಲ ಅಲ್ಲವೇ?"

"ಅಯ್ಯೋ. ನಾನು ಹೇಳಿದ್ದು ಅದಲ್ಲ," ಎಂದು ಡಾಕ್ಟರು ನಡುವೆಯೇ ನುಡಿದರು. "ನರಗಳ ಖಾಯಿಲೆಯ ಬಗ್ಗೆ ಇದಮಿತ್ಥಂ ಎಂದು ಹೇಳಲಾಗುವುದಿಲ್ಲ. ಅದರಲ್ಲಿಯೂ ನರ ನಾಶವಾಗುವುದರಿಂದ ಆಗುವ ಖಾಯಿಲೆಗಳ ಬಗ್ಗೆ ಖಚಿತವಾಗಿ ಏನನ್ನೂ ಹೇಳಲಾಗುವುದಿಲ್ಲ. ಅವು ಉಲ್ಬಣವಾಗುವುವೇ? ಗುಣವಾಗುವುವೇ? ಆಗುವುದಾದರೆ ಯಾವ ಗತಿಯಲ್ಲಿ? ಯಾವುದೂ ಖಚಿತವಾಗಿ ಹೇಳಲಾಗದು. ಅವು ಉಲ್ಬಣಿಸಲೂ ಬಹುದು. ಇಲ್ಲವೇ ಈಗ ಇರುವಂತಹ ಪೆದ್ದನ ಸ್ಥಿತಿಯಲ್ಲಿಯೇ ಮುಂದುವರೆಯಲೂ ಬಹುದು. ನಿಯತವಾಗಿ ಪರೀಕ್ಷೆಗಳನ್ನು ಮಾಡುತ್ತಿದ್ದರೆ ಬಹುಶಃ ಏನಾಗುತ್ತಿದೆ ಎಂದು ತಿಳಿಯಬಹುದೇನೋ?"

"ಪೆದ್ದನ ಸ್ಥಿತಿ," ಮಾಧವರಾಯರು ನಗಲು ಪ್ರಯತ್ನಿಸಿದರು. ಆದರೆ ಅದು ಹುಳ್ಳನೆ ನಗೆಯಾಯಿತು. "ನನ್ನ ಸ್ಥಿತಿಯನ್ನು ಚೆನ್ನಾಗಿ ವಿವರಿಸಿದಿರಿ. ಈ ನನ್ನ ಕುಂಚವಿದೆಯಲ್ಲ, ಅದು ಈಗ ನನ್ನದೇ ಒಂದು ಅಂಗ. ಮಾಂಸ, ಖಂಡಗಳಿಂದಲೇ ಮೊಳೆತಂತೆ ನನ್ನ ಭಾಗವೇ ಆಗಿಬಿಟ್ಟಿದೆ. ಈಗ ಅದು ನನ್ನಿಂದ ಕಳಚಿಕೊಳ್ಳುತ್ತಿದೆ. ಮಕ್ಕಳಂತೆ ಹಠ ಹಿಡಿಯುತ್ತಿದೆ. ದಂಗೆಯೇಳುತ್ತಿದೆ. ನಾನೀಗ ಏನು ಮಾಡಲೂ ತಿಳಿಯದ ಪೆದ್ದನೇ ಆಗಿಬಿಟ್ಟಿದ್ದೇನೆ ಅನ್ನುವುದು ನಿಜ."

"ಅಷ್ಟು ಹತಾಶರಾಗಬೇಕಿಲ್ಲ ರಾಯರೆ.", ಬೆನ್ನ ಮೇಲೆ ಕೈಯಿಟ್ಟು ಡಾಕ್ಟರು ಸಾಂತ್ವನ ಹೇಳಿದರು. "ಇದು ಇನ್ನೂ ಈಗಷ್ಟೆ ಆರಂಭವಾಗಿದೆ ಎಂದೆನಲ್ಲ. ಆರಂಭದಲ್ಲೇ ಅದನ್ನು ಪತ್ತೆ ಮಾಡಿದ್ದೇವೆ ಎನ್ನುವುದು ನಮ್ಮ ಅದೃಷ್ಟ. ಈಗ ಅದರ ಬೆಳೆವಣಿಗೆಯ ಮೇಲೆ ಕಣ್ಣಿಟ್ಟು, ಸರಿಯಾದ ಸಮಯಕ್ಕೆ ಏನಾದರೂ ಉಪಾಯ ಮಾಡಲು ಆದೀತು."

"ನನಗೆ ನನ್ನ ಚಿಂತೆ ಇಲ್ಲ ಡಾಕ್ಟರೇ. ಈ ಪ್ರಪಂಚದಲ್ಲಿ ವ್ಯಾನ್ ಗೋನಂತೆ ಅದ್ಭುತ ಕಲೆಯನ್ನು ಸೃಷ್ಟಿಸಿದ ಎಷ್ಟೋ ಪೆದ್ದ, ಹುಚ್ಚ ಕಲೆಗಾರರಿದ್ದಾರೆ. ಅವರಲ್ಲಿ ನಾನೂ ಒಬ್ಬನಾಗುತ್ತೇನೆ ಅಷ್ಟೆ."

ಡಾಕ್ಟರು ಮಾತಾಡಲಿಲ್ಲ.

ಮಾಧವರಾಯರು ತಮ್ಮ ಮಾತಿಗೆ ತಕ್ಕಂತೆಯೇ ಅವರ ಪರಿಸ್ಥಿತಿಯ ಬಗ್ಗೆ ಚಿಂತೆ ಮಾಡಲೇ ಇಲ್ಲ. ಡಾಕ್ಟರ ಬಳಿಗೆ ಪರೀಕ್ಷೆಗೆಂದು ಹೋಗುವುದನ್ನೂ ತಪ್ಪಿಸಲಿಲ್ಲ. ಆದರೆ ಅದೇ ಸಮಯದಲ್ಲಿ ತನ್ನ ಕೆಲಸದಲ್ಲಿ ಇನ್ನಷ್ಟು ಆಳವಾಗಿ ಮಗ್ನವಾಗಿ ಬಿಟ್ಟದ್ದೂ ನಿಜವೇ. ಧೃಢ ನಿರ್ಧಾರದೊಂದಿಗೆ ಆತ ಕುಂಚವನ್ನು ನಿಯಂತ್ರಿಸಲು ಮತ್ತೆ ಕಲಿತರು. ಒಮ್ಮೊಮ್ಮೆ ಅದು ತನ್ನಂತಾನೇ ಆಡಲೂ ಬಿಡುತ್ತಿದ್ದರು. ಹೊಸ ಹುರುಪಿನೊಂದಿಗೆ ತನ್ನ ಪೇಂಟಿಂಗನ್ನು ಪೂರ್ಣಗೊಳಿಸುವತ್ತ ಗಮನ ಹರಿಸಿದರು. ರಾಕೆಟನ್ನು ಹಾರಿಬಿಡುವ ಸಮಯದಲ್ಲಿ ವಿಜ್ಞಾನಿಗಳು ಹೇಗೆ ಎಲ್ಲವನ್ನೂ ಮರೆತು ಸದಾ ಆ ಕೆಲಸದಲ್ಲಿಯೇ ತೊಡಗುವಂತೆಯೇ ರಾಯರೂ ಶಿಸ್ತು, ಆತುರವೆರಡೂ ಕೂಡಿದಂತೆ ಭರದಿಂದ ಕೆಲಸ ಮುಂದುವರೆಸಿದ್ದರು.

ಇವೆಲ್ಲದರ ಫಲವಾಗಿ ಅಭಿಸಾರಿಕಾ ಚಿತ್ರ ಪೂರ್ಣವಾಗಿತ್ತು. ಜಗತ್ತಿನ ಎಲ್ಲೆಡೆಯಿಂದ ಮೆಚ್ಚುಗೆಯ ಮಹಾಪೂರವೇ ಹರಿದು ಬಂದಿತ್ತು. ಭಾಷಣಕಾರರು ಅದನ್ನೇ ಪುನರುಚ್ಚರಿಸುತ್ತಿದ್ದರಷ್ಟೆ.

"ಅಭಿಸಾರಿಕಾ ಕೇವಲ ಮಾಧವರಾಯರ ಕಲಾಪಯಣದಲ್ಲಿ ಮಾತ್ರವಲ್ಲ, ಅದು ಭಾರತೀಯ, ಅಲ್ಲಲ್ಲ, ಜಾಗತಿಕ ಕಲಾಕ್ಷೇತ್ರದಲ್ಲಿಯೂ, ಮಹಾನ್ ಮೈಲುಗಲ್ಲು. ಈ ಚಿತ್ರ ಹೊಸದೊಂದು ಕಲಾತೊರೆಯನ್ನು ಸೃಷ್ಟಿಸಿತು. ಮಾಧವರಾಯರ ವೃತ್ತಿ ಜೀವನವೇ ಪಲ್ಲಟಿಸಿಬಿಟ್ಟಿತು. "

ಪಲ್ಲಟ! ಅದು ನಿಜ. ಆದರೆ ಈ ಪಲ್ಲಟಕ್ಕೆ ನಾನೇ ಕಾರಣವೆಂದು ವಿಶ್ವಾಸದಿಂದ ಹೇಳಬಲ್ಲೆನೇ? ಅಥವಾ ಆ ಕುಂಚವೇ ನನ್ನನ್ನು ಅತ್ತ ದೂಡಿತೋ? ನನ್ನ ಬುದ್ಧಿ ಚಪ್ಪಲಿಯಂತೆ ಸವೆಯುತ್ತಾ ಇತ್ತು ಎನ್ನುವುದು ತಿಳಿದರೆ ಆತನಿಗೆ ಏನನ್ನಿಸಬಹುದು? ಆಗ ಅವನ ನಾಲಗೆ ನನ್ನ ಕುಂಚ ಆ ದಿನಗಳಲ್ಲಿ ಆಡುತ್ತಿತ್ತಲ್ಲ, ಹಾಗೆಯೇ ಹೊರಳಬಹುದೋ? ಅವನಿಗೆ ಇಷ್ಟವಿಲ್ಲದ ಕಡೆಗೆ? ಅವನ ಮನಸ್ಸಿನಲ್ಲಿ ಇಲ್ಲದ ಮಾತುಗಳನ್ನು ನುಡಿಯುವುದೋ?



**ಮಾಧವರಾಯರು ತಮ್ಮ ಮಾತಿಗೆ ತಕ್ಕಂತೆಯೇ ಅವರ ಪರಿಸ್ಥಿತಿಯ ಬಗ್ಗೆ ಚಿಂತೆ ಮಾಡಲೇ ಇಲ್ಲ. ಡಾಕ್ಟರ ಬಳಿಗೆ ಪರೀಕ್ಷೆಗೆಂದು ಹೋಗುವುದನ್ನೂ ತಪ್ಪಿಸಲಿಲ್ಲ. ಆದರೆ ಅದೇ ಸಮಯದಲ್ಲಿ ತನ್ನ ಕೆಲಸದಲ್ಲಿ ಇನ್ನಷ್ಟು ಆಳವಾಗಿ ಮಗ್ನವಾಗಿ ಬಿಟ್ಟದ್ದೂ ನಿಜವೇ. ಧೃಢ ನಿರ್ಧಾರದೊಂದಿಗೆ ಆತ ಕುಂಚವನ್ನು ನಿಯಂತ್ರಿಸಲು ಮತ್ತೆ ಕಲಿತರು.**



ಹಾಗೇನಾದರೂ ಆಗಿಬಿಟ್ಟರೆ, ಇಷ್ಟೊಂದು ಎಚ್ಚರದಿಂದ ಯೋಜಿಸಿದ ಈ ಸಮಾರಂಭದ ಗತಿಯೇನೋ. ಈ ಅಸಂಬದ್ಧ ಯೋಚನೆಯೇ, ಸಂಕೋಚದಿಂದ ಮುದುಡಿಕೊಂಡಿದ್ದ ರಾಯರ ಮುಖದ ಮೇಲೆ ನಗೆಯನ್ನು ಮೂಡಿಸಿತು.

"ನಲವತ್ತಾದ ಕೂಡಲೇ ಪ್ರತಿಭೆ ಒಣಗಲು ಆರಂಭಿಸುತ್ತದೆ ಎನ್ನುತ್ತೇವೆ. ಸ್ವಲ್ಪ ಮಟ್ಟಿಗೆ ಅದು ಸತ್ಯ ಕೂಡ. ಆದರೆ ನಮ್ಮಂತಹ ಸಾಧಾರಣ ಮನುಷ್ಯರ ಪಾಲಿಗಷ್ಟೆ ಅದು ನಿಜ. ಇಂತಹ ನಿಯಮಗಳು ಅಮೋಘ ಪ್ರತಿಭೆ, ಜೀನಿಯಸ್ಸುಗಳಿಗೆ ಒಪ್ಪುವುದಿಲ್ಲ. ಇಂತಹ ಅಪವಾದಗಳೇ ಆ ನಿಯಮಗಳನ್ನು ಸತ್ಯವೆನ್ನಿಸುವಂತೆ ಮಾಡುತ್ತವೆ.

"ಮಾಧವರಾಯರು ನಲವತ್ತು ವರ್ಷ ವಯಸ್ಸಿನವರಾಗಿದ್ದಾಗ, ಅವರ ಕುಂಚ ಎಡವತೊಡಗಿತ್ತು. ಆ ಕಾಲದಲ್ಲಿ ಅವರು ಬರೆದ ಚಿತ್ರಗಳು ಅವರ ಜನಪ್ರಿಯತೆಗೆ ತಕ್ಕುದಾಗಿರಲಿಲ್ಲ. ಅಂದರೆ ಅವು ಕೆಟ್ಟದಾಗಿದ್ದುವು ಅಂತಲ್ಲ. ಅದು ಹೇಗೆ ಸಾಧ್ಯ? ಬೇರೆ ಯಾರಾದರೂ ಅವನ್ನು ಚಿತ್ರಿಸಿದ್ದರೆ, ಉತ್ತಮವೆಂದು ಹೇಳಿಸಿಕೊಳ್ಳುತ್ತಿದ್ದುವು ಎನ್ನಬಹುದು."

ಇಲ್ಲ. ಈಗ ಈತ ಮೇರೆ ಮೀರಿ ಮಾತನಾಡುತ್ತಿದ್ದಾನೆ. ಆ ಚಿತ್ರಗಳು ಬಹಳ ಸಾಧಾರಣವಾಗಿದ್ದುವು ಎನ್ನಲು ಅವನಿಗೆ ಧೈರ್ಯವಿಲ್ಲ ಅನಿಸುತ್ತಿದೆ. ಅವಕ್ಕಿಂತ ಉತ್ತಮವಾದುದನ್ನು ಯಾವ ಚಿಳ್ಳೆಯೂ ಬರೆಯಬಹುದಿತ್ತು. ಒಂದು ಪೆದ್ದ ಮಗು ಕೂಡ ಆ ಚಿತ್ರಗಳಲ್ಲಿ ಯಾವುದೇ ಗೊತ್ತು, ಗುರಿಯಾಗಲಿ, ಪ್ರಮಾಣವಾಗಲಿ ಇರಲಿಲ್ಲ ಎಂದು ಹೇಳಿಬಿಡುವಂತೆ ಅವಿದ್ದುವು. ವೈಶಿಷ್ಟ್ಯ ಎನ್ನುವುದೇ ಅವುಗಳಲ್ಲಿ ಇರಲಿಲ್ಲ. ನನ್ನ ಉತ್ತಮ ಚಿತ್ರಗಳ ಬಗ್ಗೆ ಕಟು ವಿಮರ್ಶೆ ಬಂದಾಗಲೇ ಮನಸ್ಸು ಕೆಡಿಸಿಕೊಳ್ಳುವವ ನಾನಲ್ಲ. ಇನ್ನು ಆ ಕೆಟ್ಟ ಚಿತ್ರಗಳನ್ನು ಹೀಯಾಳಿಸಿದರೆ, ಅವುಗಳ ನಿಜವಾದ ಮೌಲ್ಯವನ್ನು ಎತ್ತಿ ತೋರಿಸಿದರೆ, ಯಾಕಾದರೂ ಸಿಟ್ಟಾಗಲಿ? ಶುದ್ಧ ಬೊಗಳೆ. ಸಿನಿಮಾ ಹೋರ್ಡಿಂಗು ಬರೆಯುವವರು ಕೂಡ ಆ ಚಿತ್ರಗಳಿಗಿಂತಲೂ ಉತ್ತಮವಾಗಿ ಬರೆಯಬಲ್ಲರು. ಇರಲಿ. ಗುಣಮಟ್ಟವನ್ನಾದರೂ ಹೇಗೆ ಉಳಿಸಿಕೊಳ್ಳಬಹುದಿತ್ತು ಹೇಳಿ? ಅಡ್ಡಾದಿಡ್ಡಿ ಓಡುತ್ತಿದ್ದ ಕುಂಚವನ್ನು ಹಿಡಿಯುವುದೂ ಕಷ್ಟವಾಗಿತ್ತು. ಕ್ಷಣ, ಕ್ಷಣಕ್ಕೂ ಅದು ಹೆಚ್ಚೆಚ್ಚು ದುಸ್ತರವಾಗುತ್ತಿತ್ತು. ಅಭಿಸಾರಿಕಾ ವನ್ನು ಚಿತ್ರಿಸಲು ಆರಂಭಿಸಿದಾ ಸಣ್ಣಗೆ ತಲೆಯೆತ್ತಿದ್ದ ಆ ಖಾಯಿಲೆ, ಹದ್ದು ಮೀರಿ ಬೆಳೆದಿತ್ತು.

ರಾಯರು ಮಾತು ಕೊಟ್ಟಂತೆ ನಿಯತವಾಗಿ ಡಾಕ್ಟರ ಬಳಿ ಪರೀಕ್ಷೆಗೆಂದು ಹೋಗುತ್ತಿದ್ದರು. ಡಾಕ್ಟರಿಂದಲೂ ಮೊದಲೇ ವಚನ ಪಡೆದುಕೊಂಡಾಗಿತ್ತು.

"ಡಾಕ್ಟರೇ ನನ್ನದೊಂದು ಕೋರಿಕೆ."

"ಹೇಳಿ"

"ನನ್ನ ಖಾಯಿಲೆಯ ಬಗ್ಗೆ ಏನನ್ನೂ ಮುಚ್ಚಿಡುವುದಿಲ್ಲ ಎಂದು ಪ್ರಾಮಿಸ್ ಮಾಡಿ. ನಿಮ್ಮ ಪರೀಕ್ಷೆಗಳ ಫಲ ಏನೇ ಇರಲಿ, ಎಷ್ಟೇ ಆಘಾತಕಾರಿ ಆಗಿರಲಿ, ನನ್ನಿಂದ ಮುಚ್ಚಿಡಬೇಡಿ. ಅನಿವಾರ್ಯವಾದುದನ್ನು ಎದುರಿಸಲೇ ಬೇಕಲ್ಲವೇ? ನನ್ನ ಕೈಲಾದಷ್ಟು ಪ್ರಯತ್ನಿಸುವೆ. ಆದರೆ ನನ್ನ ಪರಿಸ್ಥಿತಿಯ ಬಗ್ಗೆ ಏನೂ ಗೊತ್ತಿಲ್ಲದಿರುವುದು ನನಗೆ ಇಷ್ಟವಿಲ್ಲ."

"ಸರಿ. ಅರ್ಥವಾಯಿತು." ಪರಿಸ್ಥಿತಿಯನ್ನು ಎದುರಿಸುವ ಗಟ್ಟಿ ಮನಸ್ಸನ್ನು ಡಾಕ್ಟರು ಕಂಡರು. "ನಿಮ್ಮ ಧೈರ್ಯವನ್ನು ಮೆಚ್ಚಿದೆ. ನಾನು ಏನನ್ನೂ ಬಚ್ಚಿಡುವುದಿಲ್ಲ. ನಾನು ಕಂಡದ್ದನ್ನೆಲ್ಲ, ನನ್ನ ಅಭಿಪ್ರಾಯವನ್ನೆಲ್ಲ ಚಾಚೂ ತಪ್ಪದೆ

ತಿಳಿಸುತ್ತೇನೆ." ಎಂದಿದ್ದರು. ವಚನ ಕೊಟ್ಟಿದ್ದರು.

ಡಾಕ್ಟರು ವಚನವನ್ನು ಮುರಿಯಲಿಲ್ಲ. ಅದೇ ಕಾರಣಕ್ಕೇ ಮಾಧವರಾಯರು ಪರೀಕ್ಷೆಗೆಂದು ಬಂದಾಗಲೆಲ್ಲ ಅವರ ಸಮಾಧಾನಕ್ಕೆಂದು ಏನೋ ಒಂದು ಹೇಳುತ್ತಿರಲಿಲ್ಲ. ಪರಿಸ್ಥಿತಿ ಇದ್ದ ಹಾಗೆಯೇ ಇದೆ ಎಂದಾಗಲಿ, ಸುಧಾರಿಸಿದೆ ಎಂದಾಗಲಿ, ಇನ್ನೂ ಕೆಟ್ಟದಾಗಿದೆ ಎಂದಾಗಲಿ ಹೇಳಲಾಗುತ್ತಿರಲಿಲ್ಲ. ಒಮ್ಮೆಯೂ ಆತ ಹಾಗೆ ಹೇಳಲಿಲ್ಲ. ಆತ ಹೇಳಲಿ ಬಿಡಲಿ, ಖಾಯಿಲೆಯಂತೂ ನಿಧಾನವಾಗಿ ಗಂಭೀರವಾಗುತ್ತಿತ್ತು. ಒಂದೇ ಒಂದು ಚಿತ್ರವನ್ನೂ ಯೋಚಿಸಿದಂತೆ ಬರೆಯಲಾಗುತ್ತಿರಲಿಲ್ಲ. ತನ್ನ ಹೇಯ ಪರಿಸ್ಥಿತಿಯನ್ನು ಮನಗಂಡ ಮಾಧವರಾವ್ ಕೊನೆಗೆ ಕೈ ಚೆಲ್ಲಿ ಕುಳಿತುಬಿಟ್ಟಿದ್ದರು.

"ಸುಮಾರು ಮೂವತ್ತು ವರ್ಷಗಳ ಹಿಂದೆ. ಅವರಿಗಿನ್ನೂ ನಲವತ್ತು ವರ್ಷವಾಗಿತ್ತು. ಮಾಧವರಾಯರು ಕಲೆಗಾರಿಕೆಯಿಂದ ನಿವೃತ್ತರೇ ಆಗಿಬಿಟ್ಟಿದ್ದರು. ಎಲ್ಲರಿಗೂ ಅದು ಅಚ್ಚರಿಯಾಗಿತ್ತು. ಬಹುಶಃ ಎಲ್ಲರಂತೆ ಸಾಧಾರಣ ಚಿತ್ರಗಳನ್ನು ಬರೆಯುವುದು ಅವರಿಗೆ ಇಷ್ಟವಿರಲಿಲ್ಲವೇನೋ? ಹೊಸತನಕ್ಕೆ, ಹೊಸ ಸವಾಲುಗಳನ್ನೆದುರಿಸಲು, ಹೊಸ ಭಾವಗಳನ್ನು ಸ್ಫುರಿಸಲು, ಮೇರು ಕೃತಿಗಳನ್ನು ರಚಿಸಲು ಅವರ ಮನಸ್ಸು ತುಡಿಯುತ್ತಿತ್ತು. ಅಲ್ಲವೇ? ಹಳೆಯ ಜಾಡಿನಲ್ಲೇ ಸಾಗಿದರೆ ಹೇಗೆ? ಕಾಡಿನಲ್ಲಿ ಗರ್ಜಿಸುತ್ತಾ ಆಳುವ ಸಿಂಹವನ್ನು ಪಂಜರದಲ್ಲಿಟ್ಟ ಹಾಗಿತ್ತು."

"ಇನ್ನು ಗೆಲ್ಲಲು ಏನೂ ಉಳಿದಿಲ್ಲ ಎಂದಾಗ ಅಲೆಕ್ಸಾಂಡರ್ ದಿ ಗ್ರೇಟ್ ಅಳಲು ಆರಂಭಿಸಿದ್ದನಂತೆ. ಅಂತಹ ವೈರಾಗ್ಯದಿಂದ ಮಾಧವರಾಯರು ಕೊಡವಿಕೊಂಡು ಎದ್ದು ಬಂದಿದ್ದಾರೆ."

ಅಬ್ಬಾ! ಇವ ತಿದ್ದಿ ಕೊಳ್ಳುವುದೇ ಇಲ್ಲ. ಎಂಥಹ ಉತ್ಪ್ರೇಕ್ಷೆ. ಎಂತಹ ಹಾಸ್ಯಾಸ್ಪದವಾದ ಹೋಲಿಕೆಗಳು. ಯಾವುದೂ ತನ್ನ ಪರಿಸ್ಥಿತಿಗೆ ಒಪ್ಪುವಂಥವಲ್ಲ. ಕಾಡಿನ ರಾಜ. ಅಲೆಕ್ಸಾಂಡರ್ ದಿ ಗ್ರೇಟ್. ಅಯ್ಯೋ! ತನ್ನ ಕೈಯಲ್ಲಿರುವುದೇ ಕೆಳಗುರುಳಿ ಹೋಗುತ್ತಿರುವ ಸಂದರ್ಭದಲ್ಲಿ ಹೊಸ ಸಾಮ್ರಾಜ್ಯವನ್ನು ಕಟ್ಟುವ ಕನಸನ್ನಾದರೂ ಹೇಗೆ ಕಂಡಾರು? ಕತ್ತಿಯನ್ನು ಹಿರಿಯುತ್ತಿತ್ತೆನ್ನಲಾದ ಆ ಕೈಗೆ ತನ್ನದೇ ಶೂಗಳ ದಾರವನ್ನು ಕಟ್ಟಲಾಗುತ್ತಿರಲಿಲ್ಲ. ಆತ ಕಾಡಿನ ರಾಜನೇ ಆಗಿದ್ದರೆ, ಆ ಗತ್ತಿನ ನಡೆ, ಪಂಜಗಳು ಮತ್ತು ದಾಡೆಗಳು ಮಾಯವಾಗಿದ್ದುವು. ಗರ್ಜನೆಯೂ ಉಡುಗಿತ್ತು.

ಚಿತ್ರ ಬರೆಯುವುದನ್ನು ನಿಲ್ಲಿಸಿಬಿಡುವ ನಿರ್ಧಾರ ಸುಲಭವಾದುದಾಗಿರಲಿಲ್ಲ. ಭಾರವಾದ ಹೃದಯದಿಂದಲೇ ಹಾಗೆ ತೀರ್ಮಾನಿಸಿದ್ದ. ನಾಟಕವಾಡಿ ಸಾಕಾಗಿತ್ತು. ಇದರಿಂದ ಡಾಕ್ಟರೂ ಭಾವುಕರಾಗಿಬಿಟ್ಟಿದ್ದರು. ಆದರೆ ಅವರಾದರೂ ಏನು ಸಮಾಧಾನ ಹೇಳಿಯಾರು? ಖಾಯಿಲೆ ಕೈ ಮೀರಿತ್ತು. ಆತ ನೀಡಿದ ಎಲ್ಲ ಚಿಕಿತ್ಸೆಗಳೂ ನಿಷ್ಫಲವಾಗಿದ್ದುವು. ಆರಂಭದಲ್ಲಿ ಡಾಕ್ಟರಿಗೆ ಇದ್ದ ಸಣ್ಣ ಆಸೆಯೂ ಕಮರಿ ಹೋಗಿತ್ತು.

"ಹಾಗಿದ್ದರೆ ಚಿತ್ರ ಬರೆಯುವುದನ್ನು ನಿಲ್ಲಿಸಿ ಬಿಡುತ್ತೀರೇನು? ಆಮೇಲೇನು ಮಾಡುವಿರಿ?"

"ಏನು ಮಾಡಲಿ?" ನಗಲು ಪ್ರಯತ್ನಿಸಿದ ಮಾಧವರಾಯರಿಗೆ ನಗು ಬರಲೇ ಇಲ್ಲ. "ಪೇಂಟಿಂಗಿನ ಹೊರತಾಗಿ ನನ್ನ ಜೀವಮಾನದಲ್ಲಿ ಬೇರೇನನ್ನೂ ನಾನು ಮಾಡಿದ್ದಿಲ್ಲ. ಆದರೆ ಇದು ಹೀಗೆ ಹಾಳಾಗುತ್ತಿದೆ ಎನ್ನುವುದಾದರೆ ಏನು ಮಾಡಲಿ? ಡಾಕ್ಟರೆ ನಮ್ಮ ಕ್ಷೇತ್ರದಲ್ಲಿಯೂ ಸಾಕಷ್ಟು ಆಷಾಢಭೂತಿಗಳಿದ್ದಾರೆ. ಈ ಚಿತ್ರಗಳನ್ನೆಲ್ಲ ಅಮೂರ್ತ, ಹೊಸ ಶೈಲಿ ಎಂದು ತಳ್ಳಿಬಿಡಬಹುದು. ಜನ ಅದನ್ನೂ ಮೆಚ್ಚಿಯಾರು.

"ನನ್ನ ಜನಪ್ರಿಯತೆಯಿಂದಾಗಿ ಅದರಿಂದಲೂ ಸ್ವಲ್ಪ ಹಣ ಸಂಪಾದಿಸಬಹುದು. ವಿಮರ್ಶಕರನ್ನು ಚೆನ್ನಾಗಿ ಪೋಷಿಸಿದೆನೋ? ಈ ಕಸವನ್ನೂ ಇಂದಿನ ವಿನೂತನ ಕಲೆ ಎಂದು ಹೇಳಿಸಬಹುದು. ಆದರೆ ನನಗೆ ಅಂತಹ ಬದುಕು ಬೇಕಿಲ್ಲ. ನನ್ನ ಸ್ವಭಾವ ಅದಲ್ಲ. ನಾನು ಹಾಸಿಗೆ ಎಷ್ಟುದ್ದವೋ ಅಷ್ಟಕ್ಕೇ ಕಾಲು ಚಾಚುವವ. ಇದುವರೆಗೆ ನಾನು ಸಂಪಾದಿಸಿದ, ಹಣ, ಕೀರ್ತಿ ಸಾಕು."

ಕೆಲವು ಕ್ಷಣ ಇಬ್ಬರೂ ಮೌನವಾದರು. ಡಾಕ್ಟರೂ ಖಿನ್ನರಾದರು. ಮಾಧವರಾಯರ ಕೈಯನ್ನು ಮೃದುವಾಗಿ ಒತ್ತಿ ತಮ್ಮ ಕಾಳಜಿಯನ್ನು ತೋರಿಸುವುದಷ್ಟೆ ಅವರಿಗೆ ಸಾಧ್ಯವಾಗಿತ್ತು.

ಎಲ್ಲವೂ ಮುಗಿದಂತೆಯೇ ಅನಿಸಿತ್ತು. ಅದು ಕೊನೆಯೇ ಆಗಿಬಿಡುತ್ತಿತ್ತೇನೋ? ಆದರೆ ಮುಂದಿನ ಬಾರಿ ಭೇಟಿಯಾದಾಗ ಡಾಕ್ಟರು ಹೊಸದೊಂದು ಆಸೆಯನ್ನು ತೋರಿದರು.




ಕಳೆದ ಬಾರಿಗಿಂತ ಈ ಬಾರಿ ಅವರು ಖುಷಿಯಾದ ಹಾಗಿತ್ತು.

"ಸದ್ಯ ಬಂದಿರಲ್ಲ!? ಬನ್ನಿ. ನೀವು ಬರುವುದನ್ನೇ ನಾನು ಕಾಯುತ್ತಿದ್ದೆ."

"ಯಾಕೆ ಡಾಕ್ಟರೇ? ವಿದಾಯ ಹೇಳುವುದಕ್ಕಾ?"

"ವಿದಾಯವೇ? ಹಾಗೆ ಯಾಕೆ ಹೇಳುತ್ತೀರಿ. ನನಗೆ ಅರ್ಥವಾಗುತ್ತಿಲ್ಲ "

"ಅಲ್ಲ ಡಾಕ್ಟರೇ. ಈ ಖಾಯಿಲೆ ಇಷ್ಟೊಂದು ತೀವ್ರವಾಗಿದೆ. ಇನ್ನೂ ಮತ್ತೆ, ಮತ್ತೆ ಪರೀಕ್ಷೆ ಬೇಕೆ. ಈ ಎಲ್ಲ ಪರೀಕ್ಷೆಗಳೂ ಸಾವಿಗೆ ಇನ್ನಷ್ಟು ಹತ್ತಿರವಾಗಿದ್ದೇನೆ ಅಂದಷ್ಟೆ ತೋರಿಸುತ್ತವೆ. ಇನ್ನೂ ಸತ್ತಿಲ್ಲ ಅನ್ನುತ್ತವೆ ಅಷ್ಟೇ. ಇನ್ನು ನಾನು ಇದ್ದರೇನು, ಬಿಟ್ಟರೇನು?"

"ಮಾಧವರಾಯರೇ? ದಯವಿಟ್ಟು ಹಾಗೆ ಹೇಳಬೇಡಿ."

"ನಾನು ಸುಮ್ಮನೆ ಗಾಭರಿಗೊಳ್ಳುವವನಲ್ಲ ಎನ್ನುವುದು ನಿಮಗೂ ಗೊತ್ತು. ಆದರೆ ನಾನು ಈಗ ಸತ್ಯವನ್ನಾಡದಿದ್ದರೆ, ಮುಂದೆ ಹೇಳಲು ಆಗುತ್ತದೆಯೋ, ಇಲ್ಲವೋ ."

"ನೋಡಿ. ಮೊದಲು ಕುಳಿತುಕೊಳ್ಳಿ. ನಾನು ಸತ್ಯವನ್ನೇ ಹೇಳುತ್ತೇನೆಂದು ವಚನ ಕೊಟ್ಟಿದ್ದೇನಲ್ಲ. ನೆನಪಿದೆ ತಾನೇ? ಸಾವಿನ ಕ್ಷಣ ಹತ್ತಿರ ಬಂದಿದೆ ಎಂದರೆ ನಾನೇ ನಿಮಗೆ ಮೊದಲು ತಿಳಿಸುತ್ತೇನೆ. ವಿವರವಾಗಿ. ಸರಿಯಾ? ಈಗ ನಾನು ಹೇಳುವುದನ್ನು ಕೇಳಿ. ನಿಮ್ಮ ಸಮಸ್ಯೆಗೆ ಒಂದು ಪರಿಹಾರವಿದೆ. ಆದರೆ ಅದು ಇನ್ನೂ ಪ್ರಯೋಗದ ಹಂತದಲ್ಲಿತ್ತಾದ್ದರಿಂದ ನಾನು ನಿಮಗೆ ಹೇಳಿರಲಿಲ್ಲ. ಸುಖಾಸುಮ್ಮನೆ ಆಸೆ ಹುಟ್ಟಿಸಬಾರದಲ್ಲ!? ಪ್ರಯೋಗಗಳು ಮುಗಿದಿವೆ. ಫಲ ಸಿಕ್ಕಿದೆ. ಅದು ಈಗ ಕೇವಲ ಪ್ರಯೋಗವಾಗಿ ಉಳಿದಿಲ್ಲ. ಚಿಕಿತ್ಸೆ. ಚಿಕಿತ್ಸೆ."

"ಚಿಕಿತ್ಸೆಯಾ?" ಮಾಧವರಾಯರು ಅಪನಂಬಿಕೆಯಿಂದಲೇ ಪ್ರಶ್ನಿಸಿದರು. ಹಾಗೆ ನಂಬುವುದಾದರೂ ಹೇಗೆ?

"ನಿಮ್ಮ ಮಿದುಳಿನ ಕೆಲವು ನರಕೋಶಗಳು ನಶಿಸುತ್ತಿವೆ. ಅದನ್ನು ತಡೆಯಲು ಸಾಧ್ಯವಿಲ್ಲ, ನಿಜ. ಅವೆಲ್ಲ ಹೆಚ್ಚೂ, ಕಡಿಮೆ ಸತ್ತೇ ಹೋಗಿವೆ. ಚರ್ಮದಲ್ಲಿ ಗಾಯವಾದರೆ ಆಗುವಂತೆ ಅವುಗಳ ಜಾಗದಲ್ಲಿ ಹೊಸ ನರಕೋಶಗಳು ಬರುವುದೂ ಇಲ್ಲ."

"ಅದೆಲ್ಲ ನನಗೆ ಗೊತ್ತು ಡಾಕ್ಟರ್.."

"ಇದಕ್ಕೆ ಒಂದು ಪರಿಹಾರವಿದೆ," ರಾಯರ ಮಾತನ್ನು ಅರ್ಧಕ್ಕೇ ನಿಲ್ಲಿಸಿ ಡಾಕ್ಟರು ಮುಂದುವರೆಸಿದರು. "ಕಸಿ. ನರಕೋಶದ ಕಸಿ. ಬೆಳೆಯಬಲ್ಲ ಹೊಸ ಕೋಶಗಳ ಕಸಿ. ನಾಶವಾಗಿರುವ ನರಕೋಶಗಳ ಜಾಗವನ್ನು ತುಂಬುವ ಕೋಶಗಳ ಕಸಿ. ಇಂತಹ ಕೋಶಗಳ ಆಕರ ಒಂದೇ ಒಂದಿದೆ."

"ಯಾವುದೋ?" ಇಷ್ಟವಿಲ್ಲದಿದ್ದರೂ ಮಾಧವರಾಯರ ಬಾಯಿ ಪ್ರಶ್ನಿಸಿಯೇ ಬಿಟ್ಟಿತು.

"ಭ್ರೂಣ. ಪುಟ್ಟ ಭ್ರೂಣ. ಇನ್ನೂ ಶೈಶವ್ಯದಲ್ಲಿರುವ ನರಕೋಶಗಳು. ಭ್ರೂಣದಲ್ಲಿರುವ ಜೀವಕೋಶಗಳು ನಿಮ್ಮ ಮಿದುಳಿನಲ್ಲಿ ನರಕೋಶಗಳಿಗೆ ಆಗಿರುವ ನಷ್ಟವನ್ನು ತುಂಬಿಕೊಡಬಲ್ಲವು. ಅವು ಬೆಳೆದು ನಿಮಗೆ ಹೊಸ ಹುರುಪನ್ನು ತುಂಬಬಲ್ಲುವು. ನೀವು ಮತ್ತೆ ನಿಮ್ಮ ಕಲೆಯನ್ನು ಮುಂದುವರೆಸಬಹುದು. ಇನ್ನೂ ಎತ್ತರಕ್ಕೆ ಅದನ್ನು ಕೊಂಡೊಯ್ಯಬಹುದು. ಮತ್ತೆ ನಿಮ್ಮ ಕಲೆ ಚಿಗುರಬಹುದು."

"ಆದರೆ ಅಂತಹ ಭ್ರೂಣ ಸಿಗಬೇಕಲ್ಲ? ಎಲ್ಲಿಂದ ಸಿಗುತ್ತದೆ? ಅಂತಹ ದಾನಿಗಳು ಯಾರಿದ್ದಾರೆ? ಅಲ್ಲದೆ ಆ ಕಸಿ ಶಸ್ತ್ರಚಿಕಿತ್ಸೆ..?

"ಅವೆಲ್ಲದರ ಚಿಂತೆ ನಿಮಗೆ ಬೇಡ. ನಿಮ್ಮ ಒಪ್ಪಿಗೆ ಕೊಟ್ಟರೆ ಸಾಕು. ಉಳಿದದ್ದನ್ನೆಲ್ಲ ನಾನು ನೋಡಿಕೊಳ್ಳುವೆ. "

ಈ ವಿಚಿತ್ರ ಕಲ್ಪನೆಯನ್ನು ನಾನು ಮೊದಲಿಗೆ ವಿರೋಧಿಸಿದ್ದೆ. ಕೊನರಬೇಕಿದ್ದ ಜೀವವೊಂದನ್ನು ಆರಂಭದಲ್ಲಿಯೇ ಚಿವುಟಿ, ಅದರಿಂದ ನನ್ನ ಚಿಕಿತ್ಸೆಗೆ ಮದ್ದು ಪಡೆಯುವುದೇ? ಇದು ನನಗೆ ಅತ್ಯಂತ ಹೇಯಕೃತ್ಯವೆಂದು ಅನಿಸಿತು. ಆದರೆ ಹೇಳಿ. ಯಾರಿಗೆ ತಾನೇ ತಮ್ಮ ಜೀವಕ್ಕಿಂತಲೂ ಮಿಗಿಲಾದದ್ದು ಇದೆ? ತಮ್ಮ ಜೀವವುಳಿಸಿಕೊಳ್ಳಲು ಜನ ನರಕಕ್ಕೂ ಹೋಗಿ ಬಂದಾರಲ್ಲವೇ? ಹಾಗೆ ನೋಡಿದರೆ ನಾನೇನೂ ಮಹಾತ್ಮನಲ್ಲ! ಅಲ್ಲವೇ?



"ಎಷ್ಟು ಅನಿರೀಕ್ಷಿತವಾಗಿ ಕುಂಚವನ್ನು ಬಿಸಾಡಿದ್ದರೋ, ಅಷ್ಟೇ ಅನಿರೀಕ್ಷಿತವಾಗಿ ಮಾಧವರಾಯರು ಅದನ್ನು ಮತ್ತೆ ಹಿಡಿದರು. ಹೊಸ ಹುರುಪಿನೊಂದಿಗೆ ಎರಡನೆಯ ಬದುಕನ್ನು ಆರಂಭಿಸಿದರು. ನವೋದಯವಾಯಿತು. ಶೈಲಿಯಲ್ಲಿ ಆತ ಅನಭಿಷಿಕ್ತ ದೊರೆಯಾಗಿಬಿಟ್ಟರು."

ಅಂದಿನಿಂದ ಆತನ ಚಿತ್ರಕಲೆ, ಅದರಲ್ಲಿಯೂ ಕಳೆದ ದಶಕದಲ್ಲಿ ಪೂರ್ಣಗೊಳಿಸಿದಂಥವು, ಹೊಸದೊಂದು, ಮೋಹಕ ಕಳೆಯನ್ನು ಪಡೆದಿವೆ. ಅವು ಭಯಾನಕವೆನ್ನಿಸಿದರೂ, ಮೋಹಕವೂ ಹೌದು. ಬೇವು, ಬೆಲ್ಲದಂತೆ ದುಃಖದೊಟ್ಟಿಗೆ ಒಂದಿಷ್ಟು ಖುಷಿಯನ್ನೂ ಬೆರೆಸಿಕೊಂಡಿವೆ. ಅವುಗಳು ನಿಮ್ಮನ್ನು ಆಕರ್ಷಿಸಿದಂತೆಯೇ, ಕಾಳಿದಾಸ ಹೇಳುವಂತೆ, ಪರ್ಯುತ್ಸುಕ ತೆಯತ್ತ ದೂಡುತ್ತವೆ. ಕವಿಕುಲಗುರುವಿನ ಆ ಎರಡು ಸಾಲುಗಳನ್ನು ನೆನಪಿಸುತ್ತವೆ: ***"ರಮ್ಯಾನಿ ವೀಕ್ಷ್ಯ ಮಧುರಾಂಶ್ಚ ನಿಶ್ಚಮ್ಯ ಶಬ್ದಾನ್..!"***

**ಅಂದಿನಿಂದ ಆತನ ಚಿತ್ರಕಲೆ, ಅದರಲ್ಲಿಯೂ ಕಳೆದ ದಶಕದಲ್ಲಿ ಪೂರ್ಣಗೊಳಿಸಿದಂಥವು, ಹೊಸದೊಂದು, ಮೋಹಕ ಕಳೆಯನ್ನು ಪಡೆದಿವೆ. ಅವು ಭಯಾನಕವೆನ್ನಿಸಿದರೂ, ಮೋಹಕವೂ ಹೌದು. ಬೇವು, ಬೆಲ್ಲದಂತೆ ದುಃಖದೊಟ್ಟಿಗೆ ಒಂದಿಷ್ಟು ಖುಷಿಯನ್ನೂ ಬೆರೆಸಿಕೊಂಡಿವೆ. ಅವುಗಳು ನಿಮ್ಮನ್ನು ಆಕರ್ಷಿಸಿದಂತೆಯೇ, ಕಾಳಿದಾಸ ಹೇಳುವಂತೆ, ಪರ್ಯುತ್ಸುಕ ತೆಯತ್ತ ದೂಡುತ್ತವೆ. ಕವಿಕುಲಗುರುವಿನ ಆ ಎರಡು ಸಾಲುಗಳನ್ನು ನೆನಪಿಸುತ್ತವೆ: 'ರಮ್ಯಾನಿ ವೀಕ್ಷ್ಯ ಮಧುರಾಂಶ್ಚ ನಿಶ್ಚಮ್ಯ ಶಬ್ದಾನ್..!'**

ಇವರ ಈ ವಿಶಿಷ್ ಶೈಲಿಯೇ ಈಗ ಜಗತ್ತಿನಾದ್ಯಂತ ಹುರುಪೆಬ್ಬಿಸಿವೆ. ಈ ಶೈಲಿಯನ್ನು ಹಲವರು ನಕಲು ಮಾಡಿ ಪ್ರಯತ್ನಿಸಿದ್ದಾರಾದರೂ, ಸಫಲರಾಗಲಿಲ್ಲ. ಮಾಧವರಾಯರ ಈ ಚಿತ್ರಗಳು ಪ್ರಪಂಚದ ಬೇರೆಯದೇ ಮಗ್ಗುಲನ್ನು ಪ್ರದರ್ಶಿಸುತ್ತವೆ. ಇವರ ಕುಂಚಗಳ ಕಲೆಯನ್ನು, ವಿನ್ಯಾಸವನ್ನು ವಿವರಿಸಲು ಶಬ್ದಗಳು ಸಾಲವು. ಅವನ್ನು ಚಿತ್ರ ಕವನ ಎಂದು ಹೇಳಬಹುದೇನೋ?

"ಹಾಂ. ಆ ಬಣ್ಣಗಳ ಮಿಶ್ರಣವೂ ಅಷ್ಟೆ. ಈ ಜಗತ್ತಿನವು ಅಲ್ಲವೇ ಅಲ್ಲ. ಅವು ನಿಗೂಢ. ಅನ್ಯಲೋಕದವೆನ್ನಿಸುತ್ತವೆ. ಆಕರ್ಷಿಸುವ ಈ ವರ್ಣಗಳಾಗಲಿ, ರಂಗುಗಳಾಗಲಿ ಹುಡುಕಿದರೂ ಈ ಪ್ರಪಂಚದಲ್ಲಿ ಸಿಗುವುದಿಲ್ಲ. ಬೇರೆ ಯಾರ ಕಲೆಯಲ್ಲಿಯೂ ಇದನ್ನು ಕಾಣಲಾಗದು. ಚಿತ್ರಗಳಲ್ಲಿಯೇಕೆ, ಪ್ರಪಂಚದಲ್ಲಿ ಎಲ್ಲಿಯೂ ಇಂತಹ ರಂಗು ಸಿಗುವುದಿಲ್ಲ. ಮಾಧವರಾಯರು ಅವನ್ನು ಹೇಗೆ ಕಲ್ಪಿಸಿಕೊಳ್ಳುತ್ತಾರೆನ್ನುವುದೇ ನಿಗೂಢ ರಹಸ್ಯ. ಈ ವಿಶ್ವವನ್ನೇ ಬೆಳಗುವ ಸೂರ್ಯನ ಪ್ರಖರತೆಗಿಂತಲೂ ಸಹಸ್ರಪಟ್ಟು ಮಿಗಿಲಾದವು. ವಿಶ್ವದ ಆ ರಂಗು-ರಂಗಿನ ಮಹಾಪ್ರಭೆಯನ್ನು ಮಾಧವರಾಯರು ನಮ್ಮ ಮುಂದೆ ತೆರೆದಿಡುತ್ತಾರೆ."

ಕೊನೆಗೂ ಲಲಿತಕಲಾ ಅಕಾಡೆಮಿ ಈ ವಿಶಿಷ್ಟ, ಅನನ್ಯವಾದ ಕಲೆಗಾರಿಕೆಯನ್ನು

ಗುರುತಿಸಲೇ ಬೇಕಾಗಿತ್ತು. ಇಂತಹ ಅದ್ಭುತವಾದೊಂದು ಕಲೆಯನ್ನು, ಖುಷಿಯನ್ನು ನೀಡಿದವರಿಗೆ ನಮ್ಮ ಕೃತಜ್ಞತೆಯನ್ನು ಹೇಳುವ ನೆಪವೊದಗಿತು. ಆ ಕಲೆಯನ್ನು ಅಭಿನಂದಿಸುವ ಕಾಲ ಬಂದಿತು. ನಿಮಗೆಲ್ಲ ತಿಳಿದಿರುವ ಹಾಗೆ, ಅದೇ ಕಾರಣಕ್ಕೇ ನಾವು ಇಲ್ಲಿ ನೆರೆದಿದ್ದೇವೆ. ಕಲಾಪ್ರಪಂಚದ ಮಹಾತಪಸ್ವಿಗೆ ನಮ್ಮೆಲ್ಲರ ನಮನ."

ಸಮುದ್ರದ ಉಬ್ಬರವಿಳಿತದಂತೆ ಮಾತುಗಳು ರಾಯರ ಕಿವಿಗೆ ಅಪ್ಪಳಿಸುತ್ತಿದ್ದುವು. ಅದರ ಕಂಪನಗಳು ಎಲ್ಲೆಡೆ ಹರಡುತ್ತಿದೆ ಎಂದೂ ಭಾಸವಾಯಿತು. ಆದರೆ ಅವುಗಳ ಅರ್ಥ ತಿಳಿಯಲೇ ಇಲ್ಲ. ರಾಯರು ಸಮಾಧಿಗ್ರಸ್ತನಂತೆ ಕುಳಿತಲ್ಲೇ ಕುಳಿತಿದ್ದರು. ಮನಸ್ಸಿನಲ್ಲೊಂದು ಚಂಡಮಾರುತವೇ ಬೀಸುತ್ತಿತ್ತು. ಅದರ ಭರದಲ್ಲಿ ರಾಯರು ತರಗೆಲೆಯಂತೆ ಆಗಿಬಿಟ್ಟಿದ್ದರು.

ಆತ ಹೀಗೆ ಅರೆನಿದ್ರಾವಸ್ಥೆಯಲ್ಲಿರುವಾಗಲೇ ಅಧ್ಯಕ್ಷರು ಸನ್ಮಾನದ ಶಾಲನ್ನೂ ಹೆಗಲ ಮೇಲೆ ಹೊದಿಸಿದರು. ಕೈಯಲ್ಲಿ ಫಲತಾಂಬೂಲದ ತಟ್ಟೆಯನ್ನಿಟ್ಟರು, ನಟರಾಜನ ದೊಡ್ಡ ಪುತ್ಥಳಿಯೊಂದನ್ನು ಸ್ಮರಣಿಕೆಯಾಗಿ ಕೈಗಿತ್ತಿದ್ದರು. ಹೀಗೆ ಅರೆ ಎಚ್ಚರವಾದ ಸ್ಥಿತಿಯಲ್ಲಿಯೇ ರಾಯರು ತನ್ನ ಅನಿಸಿಕೆಗಳನ್ನು ಹೇಳಲು ಮೈಕಿನ ಮುಂದೆ ನಿಂತರು.

ಮನದಲ್ಲಿ ಗೊಂದಲವೋ ಗೊಂದಲ. ನನ್ನ ಈ ಎಲ್ಲ ಅಭಿಮಾನಿಗಳಿಗೆ ಏನೆಂದು ಹೇಳಲಿ? ನನ್ನ ಹೊಸ ಶೈಲಿಯ ಬಗ್ಗೆ ಹಾಡಿ ಹೊಗಳಿದ್ದಾರೆ. ಆದರೆ ಅದನ್ನು ಮುಚ್ಚಿರುವ ಆ ರಹಸ್ಯ ಪರದೆಯನ್ನು ಮೇಲೆತ್ತಲೇ? ಹೇಗೆ? ನನ್ನ ಶೈಲಿ ಅನನ್ಯವೆಂದೂ, ವಿಶಿಷ್ಟವೆಂದು ಅವರಿಗೆ ಅನ್ನಿಸಿದೆ. ಅದರಲ್ಲೊಂದು ನಿಗೂಢ ಅರ್ಥವನ್ನು ಅವರು ಕಂಡಿದ್ದಾರೆ. ಆ ರಚನೆಗಳನ್ನು ಕಂಡ ಕಣ್ಣು ಎಲ್ಲರದಂಥಲ್ಲವೆಂದು ನಂಬಿದ್ದಾರೆ. ಅದು ಮಾತ್ರ ಸತ್ಯ. ಆ ಕಲೆಯನ್ನು ಕಂಡ ಕಣ್ಣುಗಳೇ ಬೇರೆಯವು. ಆ ಗ್ರಹಿಕೆ ಈ ಲೋಕದ್ದಲ್ಲವೇ ಅಲ್ಲ.

ಭ್ರೂಣಗಳಿಗೆ ಗ್ರಹಣ ಶಕ್ತಿಯಿಲ್ಲ. ಸಂವೇದನೆಯಿಲ್ಲ ಎಂದವರಾರೋ? ಇಂಗ್ಲೆಂಡಿನಲ್ಲಿ ಡೇಮ್ ವಾರ್ನೋಕ್ ಎಂಬ ವಿಜ್ಞಾನಿಯ ಅಧ್ಯಕ್ಷತೆಯಲ್ಲಿ ನಡೆವ ಸಮಿತಿಯವರನ್ನು ಕೇಳಿ ನೋಡಿ. ಜೀವ ಆರಂಭವಾಗುವುದು ಯಾವಾಗ ಅಂತ. ಅಮ್ಮನ ಬಸಿರಿನಿಂದ ಹೊರ ಬಂದು ಮೊದಲ ಅಳು ಅಳುವಾಗಲೋ? ಅಲ್ಲವಂತೆ. ಅಮ್ಮನ ಅಂಡಾಶಯ, ಅಪ್ಪನ ವೀರ್ಯದೊಟ್ಟಿಗೆ ಕೂಡಿ ಹುಟ್ಟಿದ ಜೈಗೋಟು ಎಂಟು ದಿನದ್ದಾಗಿದ್ದಾಗಲೇ ಜೀವದ ಮೊಳಕೆ ಕಾಣಿಸುತ್ತದೆಯಂತೆ. ಸೃಷ್ಟಿ ಏಳು ದಿನಗಳಲ್ಲಿ ನಡೆಯಿತು ಎನ್ನುತ್ತದಲ್ಲ ಪುರಾಣ. ಅದರ ಎಂಟನೆಯ ದಿನ ಇದು ಎನ್ನೋಣವೇ?

ಜೀವ ಮೊಳೆತೊಡನೆ ಸಂವೇದನೆಗಳೂ, ಗ್ರಹಿಕೆಯೂ ಹುಟ್ಟುತ್ತವೆ ಎನ್ನುವುದು ಸತ್ಯವೇ ಇರಬೇಕು. ಜೀವ, ನಿರ್ಜೀವದ ನಡುವಿನ ವ್ಯತ್ಯಾಸವೇ ಇದಲ್ಲವೇ? ಸುತ್ತಲಿನ ತಾಪ, ತೇವ, ಬೆಳಕಿನಲ್ಲಾಗುವ ಬದಲಾವಣೆಗಳಿಗೆ ಜೀವವಲ್ಲದೆ, ಕೊರಡು ಪ್ರತಿಕ್ರಯಿಸಬಲ್ಲುದೇ? ವಾಸ್ತವದಲ್ಲಿ, ಮರಕಡಿಯುವವನ ಕೊಡಲಿಯ ಏಟಿಗೂ ಕೊರಡು ಕಿಮಕ್ ಎನ್ನಲಾರದು. ಅದಕ್ಕೆ ಸಂವೇದನೆಯೇ ಇಲ್ಲದಾಗ ಪ್ರತಿಕ್ರಯಿಸುವದಾದರೂ ಹೇಗೆ? ಆದರೆ ಈ ಕೊರಡು ಕೊಟ್ಟಂತಹ ಮರದ ಕಥೆಯೇ ಬೇರೆ. ಅದು ಪರಿಸರದಲ್ಲಿನ ಬದಲಾವಣೆಗಳಿಗೆ ಮುಕ್ತವಾಗಿ ಸ್ಪಂದಿಸುತ್ತದೆ. ಮಳೆ ಬಂದರೆ ಅರಳುತ್ತದೆ. ಛಳಿಗಾಲದಲ್ಲಿ ಮುರುಟುತ್ತದೆ. ಜೀವದ ಲಕ್ಷಣವೇ ಅದಲ್ಲವೇ?

ಭ್ರೂಣವಾದರೇನಂತೆ? ಜೀವವಿರುವ ಅದು



**ಸಮುದ್ರದ ಉಬ್ಬರವಿಳಿತದಂತೆ ಮಾತುಗಳು ರಾಯರ ಕಿವಿಗೆ ಅಪ್ಪಳಿಸುತ್ತಿದ್ದುವು. ಅದರ ಕಂಪನಗಳು ಎಲ್ಲೆಡೆ ಹರಡುತ್ತಿದೆ ಎಂದೂ ಭಾಸವಾಯಿತು. ಆದರೆ ಅವುಗಳ ಅರ್ಥ ತಿಳಿಯಲೇ ಇಲ್ಲ. ರಾಯರು ಸಮಾಧಿಗ್ರಸ್ತನಂತೆ ಕುಳಿತಲ್ಲೇ ಕುಳಿತಿದ್ದರು. ಮನಸ್ಸಿನಲ್ಲೊಂದು ಚಂಡಮಾರುತವೇ ಬೀಸುತ್ತಿತ್ತು. ಅದರ ಭರದಲ್ಲಿ ರಾಯರು ತರಗೆಲೆಯಂತೆ ಆಗಿಬಿಟ್ಟಿದ್ದರು.**



ಕೂಡ ಸ್ಪಂದಿಸಬಲ್ಲುದು. ನೀವು ನನ್ನ ಕ್ಯಾನ್ವಾಸಿನ ಮೇಲೆ ನೋಡುವುದೆಲ್ಲವೂ ಆ ಭ್ರೂಣದ ಸಂವೇದನೆಗಳ ಅಭಿವ್ಯಕ್ತಿ. ಗರ್ಭದೊಳಗೆ ತಾನು ಅನುಭವಿಸಿದ್ದನ್ನೆಲ್ಲ, ಗ್ರಹಿಸಿದ್ದನ್ನೆಲ್ಲ ಅದು ಅಭಿವ್ಯಕ್ತಿಸುತ್ತದೆ. ಇವು ಇನ್ನೂ ಮುಚ್ಚಿಯೇ ಇರುವ ಕಣ್ಣುಗಳು ಕಂಡ ವಿಶ್ವದ ಬಿಂಬಗಳು. ಈ ರಂಗು ಈ ಲೋಕದ್ದಲ್ಲ ಎನಿಸಿತಲ್ಲವೇ? ಮುತ್ತಾಳರು. ನೀವೆಲ್ಲ ಮುತ್ತಾಳರು. ಈ ಬಣ್ಣಗಳೂ ಇದೇ ಲೋಕದವೇ. ಆದರೆ ಅವು ನಮ್ಮ ಕಣ್ಣುಗಳಿಗೆ ಕವಿದಿರುವ ಕಾಮನಬಿಲ್ಲಿನ ರಂಗುಗಳಾಚೆ ಇರುವಂಥವು. ಈ ಬಣ್ಣಗಳನ್ನು ನೀವು ನೋಡಬೇಕೆಂದರೆ ಇದ್ದುದರಾಚೆಗೇನಿದೆ ಎನ್ನುವುದನ್ನು ತಿಳಿಯಬೇಕು. ನಮಗೆ ಇವು ಕಾಣುವುದಿಲ್ಲ. ನಾವು ಇವನ್ನು ಕಾಣಲಾರೆವು. ಹೇಗೆ ಕಂಡೀತು ಹೇಳಿ? ಸಂಸ್ಕಾರ ಎನ್ನುವ ಬಟ್ಟೆ ಕಟ್ಟಿಕೊಂಡಿರುವ ಗಾಂಧಾರಿಯಂತೆ ನಾವು. ಶಿಕ್ಷಣ, ತರಬೇತಿ, ಸಂಸ್ಕೃತಿ ಹಾಗೂ ಸಾಮಾಜಿಕ ಶಿಸ್ತೆಂಬ ಬಟ್ಟೆಯನ್ನು ಕಣ್ಣಿಗೆ ಕಟ್ಟಿಕೊಂಡಿದ್ದೇವೆ. ಇವೆಲ್ಲವೂ ನಾವು ಗಾಂಧಾರಿಯಾಗುವುದಕ್ಕೂ ಮುನ್ನ ಕಾಣುವ ನೋಟಗಳು. ಬಣ್ಣಗಳು. ಮುಕ್ಕಾಲು ಪಾಲು ಜನರ ಕಣ್ಣು ಕಟ್ಟಿದೆ. ಆ ಕಣ್ಣಿಗೆ ಆಕಾರಗಳು ಕಾಣುವುದಿಲ್ಲ. ಏನಿದ್ದರೂ ಪ್ರಖರ ಪ್ರಭೆಯ ವೈಭವವಷ್ಟೆ ಕಾಣುತ್ತದೆ.

ನನ್ನ ಕ್ಯಾನ್ವಾಸಿನ ಮೇಲೆ ಕಾಣುವುದೂ ಅದೇ. ಕ್ಯಾನ್ವಾಸನ್ನು ನನ್ನದು ಎಂದು ಏಕೆ ಹೇಳುತ್ತೇನೆಂದರೆ, ನನ್ನ ಕೈಗಳು, ಕುಂಚ ಮತ್ತು ಬಣ್ಣದ ತಟ್ಟೆಗಳು ಈ ಅಭಿವ್ಯಕ್ತಿಗೆ ಮಾಧ್ಯಮಗಳಾಗಿವೆ. ಆದರೆ ಚಿತ್ರ ನನ್ನದಲ್ಲ. ಸಂತ ತುಕಾರಾಂ ಹೇಳುವಂತೆ "ನಾನು ಒಬ್ಬ ಹೊರೆ ಹೊತ್ತ ಕತ್ತೆ. ಅಷ್ಟೆ." ಈ ಚಿತ್ರಗಳಲ್ಲಿ ಇರುವ ಚಿಂತನೆಗಳು, ಪರಿಕಲ್ಪನೆ, ವಿನ್ಯಾಸ, ಬಣ್ಣವೆಲ್ಲವೂ ಆ ಅಜ್ಞಾತ ಶಕ್ತಿಯದ್ದು. ಹುಟ್ಟದೇ ಹೋದ, ನಮಗೆ ಬೇಡವಾದ ಭ್ರೂಣದ್ದು. ಹೊಗಳಲೇ ಬೇಕು ಎಂದರೆ ನೀವು ಅದನ್ನು ಹೊಗಳಬೇಕು. ನನ್ನನ್ನಲ್ಲ. ಅದಕ್ಕೆ ಸನ್ಮಾನ ಸಲ್ಲಬೇಕು.

ಆದರೆ ಈ ಎಲ್ಲ ಗೊಂದಲಗಳನ್ನೂ ವ್ಯಕ್ತಪಡಿಸುವ ಮಾತುಗಳು ಮಾಧವರಾಯರಿಗೆ ಸಿಗಲಿಲ್ಲ. ಆತ ಅಲ್ಲಿ ಸುಮ್ಮನೆ, ಮಾತಿಲ್ಲದೆ, ಕೈ ಮುಗಿದು ನಿಂತಿದ್ದರು. ಮನಸ್ಸಿನಲ್ಲಿದ್ದ ಗೊಂದಲವನ್ನೆಲ್ಲ ಕ್ಯಾನ್ವಾಸಿನ ಮೇಲೆ ಸಮರ್ಥವಾಗಿ ಚಿತ್ರಿಸುವ ಅದೇ ಕೈಗಳು.

ಗಡಚಿಕ್ಕುವ ಚಪ್ಪಾಳೆ ಕೇಳಿಸಿತು. ಅದನ್ನು ಸ್ವೀಕರಿಸಿದರೂ ಮಾಧವರಾಯರಿಗೆ ಅಲ್ಲಿ ನೆರೆದವರನ್ನು ನೋಡಿ ಪಾಪ ಎನ್ನಿಸಿತು. ಇವರೆಂಥ ಕಲಾರಸಿಕರೋ? ಮುತ್ತಾಳರು, ನಾನು ಅವರಿಗೆ ಕೈ ಮುಗಿಯುತ್ತಿದ್ದೇನೆಂದು ಭಾವಿಸಿದ್ದಾರೆ. ಅಭಿಮಾನಿಗಳೇ, ನಾನು ಕೈ ಮುಗಿಯುತ್ತಿರುವುದು ಆ ನಿಜವಾದ ಕಲೆಗಾರನಿಗೆ ನೀವು ಕೊಡುತ್ತಿರುವ ಈ ಸನ್ಮಾನ, ಹೊಗಳಿಕೆ ಎಲ್ಲವೂ ಸಲ್ಲಬೇಕಾದ ಆ ಕಲೆಗಾರನಿಗೆ. ನಿಮಗೆ ಇದು ಅರ್ಥವಾಗಲಿಕ್ಕಿಲ್ಲ ಬಿಡಿ. ಗೌರವ ಸಲ್ಲಬೇಕಾದವರಿಗಷ್ಟೆ ಸಲ್ಲಬೇಕು ಎನ್ನುವುದು ನನ್ನ ನಿಶ್ಚಯ. ಇಲ್ಲಿ ನಿಲ್ಲಲು ನನಗೆ ಯೋಗ್ಯತೆ ಬರುವವರೆಗೂ, ಈ ಕೈ ವಂದಿಸುತ್ತಲೇ ಇರುತ್ತದೆ. ಮೌನವಾಗಿ.!

o

**ಡಾ. ಗಜಾನನ ಫೋಂಡ್ಕೆ, ಬಾಳ ಫೋಂಡ್ಕೆ ಎನ್ನುವ ಕಾವ್ಯನಾಮದಲ್ಲಿ ಮರಾಠಿ ಹಾಗೂ ಇಂಗ್ಲೀಷಿನಲ್ಲಿ ವೈಜ್ಞಾನಿಕ ಕಥೆಗಳನ್ನು ಬರೆದಿದ್ದಾರೆ. ತಮ್ಮದೇ ಶೈಲಿಯನ್ನು ಮರಾಠಿ ಸಾಹಿತ್ಯದಲ್ಲಿ ಸ್ಥಾಪಿಸಿದ್ದಾರೆ.**
**ಅನುವಾದ: ಕೊಳ್ಳೇಗಾಲ ಶರ್ಮ**




# ಪ್ರಕೃತಿ ವಿಜ್ಞಾನಗಳ ಕಥೆಗಾರ

## ದೇವೇಂದ್ರ ಮೇವಾಡಿ

ಶ್ರೀ ದೇವೇಂದ್ರ ಮೇವಾಡಿ, ವಿಜ್ಞಾನ ಹಾಗೂ ಸಾಹಿತ್ಯಗಳೆಂಬ ಎರಡು ವಿಶಿಷ್ಟ ಕ್ಷೇತ್ರಗಳ ಜೊತೆಗೂ ಆಪ್ತ ಸಂಬಂಧವಿರುವ ಹಾಗೂ ಎರಡನ್ನೂ ತಳುಕಿಸಲು ಶ್ರಮಿಸುತ್ತಿರುವ ಹಿರಿಯ ಲೇಖಕ ಹಾಗೂ ವೈಜ್ಞಾನಿಕ ಕಥೆಗಾರ. ಐವತ್ತು ವರ್ಷಗಳಿಂದಲೂ ಜನಸಾಮಾನ್ಯರಿಗಾಗಿ ವಿಜ್ಞಾನ ಲೇಖನಗಳನ್ನು ಒಂದೆಡೆ ಬರೆಯುತ್ತಲೇ, ಇನ್ನೊಂದೆಡೆ ವೈಜ್ಞಾನಿಕ ಕಥೆಗಳು ಹಾಗೂ ಜೀವನಚಿತ್ರಗಳನ್ನು ಬರೆಯುತ್ತಾ ಸಾಹಿತ್ಯದ ಜೊತೆಗೂ ಒಡನಾಡಿದ್ದಾರೆ. "ಮೇರೀ ಯಾದೋಂ ಕಾ ಪಹಾಡ್" (ನೆನಪುಗಳ ಗುಡ್ಡ) ಎನ್ನುವ ಅವರ ಆತ್ಮಕಥೆಗೆ ದೊರಕಿದ ಓದುಗರ ಮೆಚ್ಚುಗೆ ಅಪಾರ. ಸಮಾಜದಲ್ಲಿ ವಿಜ್ಞಾನದ ಬಗ್ಗೆ ಅರಿವು ಮೂಡಿಸುವುದರಲ್ಲಿ ಮೇವಾಡಿಯವರ ಕೊಡುಗೆ ಅನನ್ಯ. "ಸಾಹಿತ್ಯದ ಲೇಖನಿಯಿಂದ ವಿಜ್ಞಾನ ಬರೆಯುವವ" ಎಂದು ಬಣ್ಣಿಸಿಕೊಳ್ಳುವ ಅವರ ಬರೆಹಗಳು ಜನಸಾಮಾನ್ಯರ ಕುತೂಹಲವನ್ನು ಕೆರಳಿಸುತ್ತವೆ. ವಿಜ್ಞಾನ ಲೇಖನಗಳನ್ನು ಹಲವು ರೂಪಗಳಲ್ಲಿ ಕಥನಿಸಿದ್ದಾರೆ. "ಕಥಾ ಕಥೋ ಯಾಯಾವರ್", "ರಹೀ ಮೈಂ ವಿಜ್ಞಾನ್ ಕಾ", "ವಿಜ್ಞಾನ್ ಮೇಲಾ ಮೇ", "ವಿಜ್ಞಾನ್ ಕೀ ದುನಿಯಾ", "ದೆಲ್ಹೀ ಸೇ ತುಂಗನಾಥ್ ವಯಾ ನಾಗನಾಥ್", "ನಾಟಕ್–ನಾಟಕ್ ಮೇ ವಿಜ್ಞಾನ್" "ಮೇರೀ ಯಾದೋಂ ಕಾ ಪಹಾಡ್", "ವಿಜ್ಞಾನ್ ಔರ್ ಹಂ", "ವಿಜ್ಞಾನನಾಮಾ", "ಮೇರೀ ವಿಜ್ಞಾನ್ ಡೈರಿ–1 & 2", ಮೇರೀ ಪ್ರಿಯ ವಿಜ್ಞಾನ ಕಥಾಯೇಂ" , "ಫಸಲೇಂ ಕಹೇ ಕಹಾನಿ", "ವಿಜ್ಞಾನ್ ಬಾರಾಹ್ ಮಾಸಾ", "ವಿಜ್ಞಾನ್ ಜಿನ್ ಕಾ ರೀನೀ ಹೈ", "ಸೂರಜ್ ಕೇ ಆಂಗನ್ ಮೇ", "ಸೌರಮಂಡಲ್ ಕೀ ಸೈರ್," ಮೊದಲಾದವು ಇವರ ಕೃತಿಗಳು.

ಇವಲ್ಲದೆ ಹಲವು ಪತ್ರಿಕೆಗಳನ್ನೂ, ಪುಸ್ತಕಗಳನ್ನೂ ಶ್ರೀ ಮೇವಾಡಿ ಸಂಪಾದಿಸಿದ್ದಾರೆ. ಪುಸ್ತಕಗಳನ್ನು ಅನುವಾದಿಸಿದ್ದಾರೆ. ಮುದ್ರಣ ಕ್ಷೇತ್ರದಲ್ಲಿಯಷ್ಟೇ ಅಲ್ಲ, ರೇಡಿಯೊ, ಟೆಲಿವಿಷನ್ ಹಾಗೂ ಡಿಜಿಟಲ್ ಮಾಧ್ಯಮಗಳಿಗೂ ಒಳ್ಳೆಯ ವಿಜ್ಞಾನ ಲೇಖನಗಳನ್ನು ಒದಗಿಸಿದ್ದಾರೆ.

ಅವರ ಲೇಖನ ಕೃಷಿಗಾಗಿ ಹಲವಾರು ಪ್ರಶಸ್ತಿಗಳೂ ಸಂದಿವೆ. ಇವುಗಳಲ್ಲಿ ಕೇಂದ್ರೀಯ ಸಾಹಿತ್ಯ ಅಕಾಡೆಮಿ ಬಾಲ ಸಾಹಿತ್ಯ ಪ್ರಶಸ್ತಿ (2021), ವನಮಾಲಿ ವಿಜ್ಞಾನ ಕಥಾ ಸಮ್ಮಾನ್ (2021), ಕೇಂದ್ರ ಹಿಂದಿ ನಿರ್ದೇಶನಾಲಯದ "ಶಿಕ್ಷಾ ಪುರಸ್ಕಾರ್" (2018), ಲಕ್ನೋದಲ್ಲಿರುವ ಉತ್ತರ ಪ್ರದೇಶ ಹಿಂದೀ ಸಂಸ್ಥೆಯ "ವಿಜ್ಞಾನ ಭೂಷಣ" (2017), ಆಗ್ರಾದ ಕೇಂದ್ರ ಹಿಂದೀ ಸಂಸ್ಥೆ ನೀಡುವ ಆತ್ಮಾರಾಮ್ ಪ್ರಶಸ್ತಿ,



ದೆಹಲಿಯ ಹಿಂದೀ ಅಕಾಡೆಮಿಯ ಜ್ಞಾನ್–ಪ್ರೌದ್ಯೋಗಿಕೀ ಸಮ್ಮಾನ್, ಭಾರತೀಯ ಕೇಂದ್ರ ಸರಕಾರದ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ ನೀಡುವ ರಾಷ್ಟ್ರೀಯ ವಿಜ್ಞಾನ ಲೋಕಪ್ರಿಯಕರಣ್ ಪುರಸ್ಕಾರ ಮೊದಲಾದವು ಸಂದಿವೆ.

ಶ್ರೀ ಮೇವಾಡಿಯವರು ವಿಜ್ಞಾನವನ್ನು ಎಲ್ಲರಿಗೂ ತಲುಪಿಸುವ ಉದ್ದೇಶದಿಂದ ದೇಶದ ಉದ್ದಗಲಕ್ಕೂ ಕಥೆಗಳನ್ನು ಹೇಳುತ್ತಾ ಸಾಗಿದ್ದಾರೆ. ಕಳೆದ ನಾಲ್ಕು ವರ್ಷಗಳಲ್ಲಿ ಇವರು ಒಂದು ಲಕ್ಷಕ್ಕೂ ಹೆಚ್ಚು ಮಕ್ಕಳಿಗೆ ಕಥೆ ಹೇಳುವ ಮೂಲಕ ವೈಜ್ಞಾನಿಕ ಪ್ರಪಂಚದ ಯಾತ್ರೆ ಮಾಡಿಸಿದ್ದಾರೆ.

ಶ್ರೀ ದೇವೇಂದ್ರ ಮೇವಾಡಿಯವರು ವೈಜ್ಞಾನಿಕ ಕಥೆಗಳ ಕುರಿತು ವಿಜ್ಞಾನ ಪ್ರಸಾರದ ಡ್ರೀಂ 2047 ಪತ್ರಿಕೆಯ ಸಂಪಾದಕರಾದ ಶ್ರೀ ನಿಮೀಷ್ ಕಪೂರ್ ಅವರ ಜೊತೆಗೆ ನಡೆಸಿದ ಸಂಭಾಷಣೆಯ ತುಣುಕುಗಳು ಇಲ್ಲಿವೆ.

- **ನಿಮಿಷ್ ಕಪೂರ್:** *ಮೊದಲಿಗೆ ನೀವು ವೈಜ್ಞಾನಿಕ ಎಂದು ಯಾವ ಕಥೆಗಳಿಗೆ ಹೇಳುತ್ತೀರಿ? ವೈಜ್ಞಾನಿಕ ಕಥೆ ಎಂದು ಹೇಳುವ ಕಥೆಗಳು ಹೇಗಿರಬೇಕು ಎನ್ನುವುದು ಹೊಸ ಲೇಖಕರಿಗೆ ತಿಳಿಯ ಬೇಕು. ವಿಜ್ಞಾನಾಧಾರಿತ ಸಾಮಾನ್ಯ ಕಥೆ ವೈಜ್ಞಾನಿಕ ಕಥೆ ಅಲ್ಲವೇ? ವಿಜ್ಞಾನ ಕಥಾ, ವೈಜ್ಞಾನಿಕ ಕಥೆ ಹಾಗೂ ವಿಜ್ಞಾನ ಗಲ್ಪ್‌ಗಳಿಗೆ, ವೈಜ್ಞಾನಿಕ ಕಾದಂಬರಿಗಳಿಗೆ ಇರುವ ವ್ಯತ್ಯಾಸವೇನು?*

**ದೇವೇಂದ್ರ ಮೇವಾಡಿ:** "ನೋಡಿ ನಿಮಿಷ್ ಅವರೇ. ವೈಜ್ಞಾನಿಕ ಕಥೆಗಳಿಗೆ ಹಲವು ವ್ಯಾಖ್ಯಾನಗಳಿವೆ. ಲೇಖಕರು ಹಾಗೂ ವಿಮರ್ಶಕರು ಈ ಪ್ರಕಾರವನ್ನು ಹಲವಾರು ರೀತಿಯಲ್ಲಿ ಬಣ್ಣಿಸಿದ್ದಾರೆ. ನನ್ನ ಮಟ್ಟಿಗೆ, ಯಾವುದೇ ವೈಜ್ಞಾನಿಕ ಅಂಶದ ಆಧಾರದ ಮೇಲೆ ಸೃಷ್ಟಿಸಿದ ಅಥವಾ ಕೊನೆಗೊಳ್ಳುವ ಕಥೆಗಳನ್ನು ವೈಜ್ಞಾನಿಕ ಕಥೆಗಳು ಎಂದು ಹೇಳಬಹುದು. ಸಮಾಜದ ಮೇಲೆ ವಿಜ್ಞಾನದ ಪ್ರಭಾವದಿಂದ ಹುಟ್ಟುವ ಕಥೆ ಅದು.

> ಲೋಕದಲ್ಲಿ ಕೇವಲ ಬ್ಯಾಕ್ಟೀರಿಯಾ, ವೈರಸ್ಸು ಮತ್ತು ಕೀಟಗಳಷ್ಟೆ ಇದ್ದರೆ ಏನಾಗಬಹುದು? ಅಥವಾ ಮಂಗಗಳಂತಹ ಜೀವಿಗಳ ಕೈಗೆ ಈ ಮುದ್ರಿಕೆ ಸಿಕ್ಕರೆ ಏನಾದೀತು? ನಮ್ಮಂತಹ ಬುದ್ಧಿಜೀವಿಗಳೂ ಇರಬಹುದೋ? ನಮ್ಮಂತಹ ಅನ್ನುವುದು ಇರಲಿ. ನಮಗಿಂತಲೂ ಬುದ್ಧಿವಂತ ಜೀವಿಗಳು ಇರಬಹುದಲ್ಲವೇ?

ಈ ಪ್ರಭಾವ ಹಿಂದೆ ಆಗಿದ್ದಿರಬಹುದು. ಅಥವಾ ಈಗಿನ ಮಾನವ ಸಮಾಜದ ಮೇಲೆ ಆಗುತ್ತಿರುವ ಪರಿಣಾಮಗಳೂ ಇರಬಹುದು. ಅಥವಾ ನಾಳಿನ ಪ್ರಭಾವಗಳನ್ನು ಕುರಿತೂ ಕಥೆ ಹೆಣೆಯಬಹುದು.

ಇನ್ನು ವೈಜ್ಞಾನಿಕ ಕಥೆ, ವೈಜ್ಞಾನಿಕ ಕಾದಂಬರಿಗಳ ಬಗ್ಗೆ ಹೇಳಬೇಕೆಂದರೆ ಸುಪ್ರಸಿದ್ಧ ಅಮೆರಿಕನ್ ಲೇಖಕ ಹ್ಯೂಗೋ ಜೆರ್ನ್ಸ್‌ಬ್ಯಾಕ್ ಹೇಳಿದ ಮಾತು ನೆನಪಾಗುತ್ತದೆ. 1926ರಲ್ಲಿ ಆತ ಈ ಪ್ರಕಾರಗಳನ್ನು "ವಿಜ್ಞಾನದ ಅಲಂಕಾರ" ಇರುವ, ಸೈಂಟಿಫಿಕೇಶನ್ ಆದ ಸಾಮಾನ್ಯ ಕಥೆಗಳು ಎಂದು ಬಣ್ಣಿಸಿದ್ದ. ಆಯಾ ಕಾಲದಲ್ಲಿದ್ದ ವೈಜ್ಞಾನಿಕ ಸತ್ಯಗಳನ್ನು ಒಳಗೊಂಡು, ಭವಿಷ್ಯದ ಸಾಧ್ಯತೆಗಳನ್ನು ಕುರಿತು ಬರೆದ ಜೂಲ್ಸ್ ವರ್ನೆ, ಹೆಚ್. ಜಿ ವೆಲ್ಸ್ ಮತ್ತು ಎಡ್ಗರ್ ಅಲನ್ ಪೋರವರುಗಳ ಕಥೆಗಳ ಉದಾಹರಣೆಯನ್ನು ಆತ ನೀಡಿದ್ದ.

1937ರಲ್ಲಿ ಜಾನ್ ಡಬ್ಲ್ಯೂ ಕ್ಯಾಂಪ್‌ಬೆಲ್ ಜ್ಯೂನಿಯರ್ ಎನ್ನುವ ಮತ್ತೊಬ್ಬ ಅಮೆರಿಕನ್ ಲೇಖಕ ವೈಜ್ಞಾನಿಕ ಕಥೆಗಳಿಗೆ ಇನ್ನಷ್ಟು
















ಪ್ರಾಮುಖ್ಯತೆಯನ್ನು ನೀಡಿದ. ಸೈಂಟಿಫಿಕೇಶನ್ ಹೀಗೆ ವೈಜ್ಞಾನಿಕ ಕಥೆ ಎಂದು ಸ್ಥಾಪಿತವಾಯಿತು. ಮುದ್ರಣ ಮಾಧ್ಯಮದಲ್ಲಿ ಇದನ್ನು ಎಸ್.ಎಫ್ ಎಂದೂ, ಚಲನಚಿತ್ರ ಹಾಗೂ ಇತರೆ ಮಾಧ್ಯಮಗಳಲ್ಲಿ ಇದನ್ನು ಸೈಫೈ ಎಂದೂ ಹೆಸರಿಸಿದ್ದಾರೆ. ಹಿಂದಿಯಲ್ಲಿ ವೈಜ್ಞಾನಿಕ ಕಥೆಗಳನ್ನು ವಿಜ್ಞಾನ ಕಥಾ ಎಂದೂ, ನಾಟಕ, ಕವನ, ಹಾಡು ಹಾಗೂ ಚಲನಚಿತ್ರಗಳನ್ನು ವಿಜ್ಞಾನ ಗಲ್ಪ್ ಎಂದೂ ಹೇಳುತ್ತೇವೆ. ಹೀಗೆ ವೈಜ್ಞಾನಿಕ ಕಥಾಪ್ರಕಾರದ ವಿವರಣೆ ವಿಸ್ತಾರವಾಗಿದೆ."

● **ನಿಮಿಷ್:** *ನೀವು ಐದು ದಶಕಗಳಿಂದಲೂ ವೈಜ್ಞಾನಿಕ ಕಥೆಗಳನ್ನು ಬರೆಯುತ್ತಿದ್ದೀರಿ. ವೈಜ್ಞಾನಿಕ ಕಥೆಗಳ ಜೊತೆಗೆ ನಿಮ್ಮ ಮೊದಲ ಮುಖಾಮುಖಿ ಆಗಿದ್ದು ಯಾವಾಗ? ಅನಂತರದ ನಿಮ್ಮ ಪಯಣದ ಬಗ್ಗೆ ನಮ್ಮ ಓದುಗರಿಗೆ ಒಂದಿಷ್ಟು ತಿಳಿಸಿ.*

**ಮೇವಾಡಿ:** "ನಾನು ನೈನಿತಾಲಿನಲ್ಲಿ ಉನ್ನತ ವ್ಯಾಸಂಗ ಮಾಡುತ್ತಿದ್ದಾಗ ಈ ವೈಜ್ಞಾನಿಕ ಕಥೆಗಳ ಬೀಜ ಮನಸ್ಸಿನಲ್ಲಿ ಹುದುಗಿಕೊಂಡಿತು. ಅಲ್ಲಿ ವ್ಯಾಸಂಗದ ಜೊತೆ, ಜೊತೆಗೇ ನಾನು ಹಿಂದಿಯಲ್ಲಿ ಕಥೆಗಳನ್ನು ಬರೆಯುತ್ತಿದ್ದೆ. ಇವು ಕಹಾನಿ, ಮಾಧ್ಯಮ, ಉತ್ಕರ್ಷ ಮೊದಲಾದ ಹಿಂದಿ ಸಣ್ಣಕಥೆಗಳ ಪತ್ರಿಕೆಗಳಲ್ಲಿ ಪ್ರಕಟವಾಗಿದ್ದುವು. ಆ ಸಂದರ್ಭದಲ್ಲಿ ನಾನು ಅಶೋಕ ಎನ್ನುವ ಹೆಸರಿನಲ್ಲಿ ಬರೆಯುತ್ತಿದ್ದ ವೈಜ್ಞಾನಿಕ ಕಥೆಗಾರ, ಕಥೆಗಾರ ಯಮುನಾ ದತ್ತ ವೈಷ್ಣವ್ ಅವರ ಭೇಟಿಯಾದೆ. ಆತ ವೈಜ್ಞಾನಿಕ ಕಥೆಗಳ ಬಗ್ಗೆ ವಿವರಿಸಿ ಹೇಳಿದರು. ಅಲಹಾಬಾದಿನಲ್ಲಿ ಓದುತ್ತಿದ್ದಾಗ ಆತ ಬರೆದ *ವೈಜ್ಞಾನಿಕ್ ಕೀ ಪತ್ನಿ* (ವಿಜ್ಞಾನಿಯ ಹೆಂಡತಿ) ಎನ್ನುವ ಕಥೆಗೆ ಕಥಾಸ್ಪರ್ಧೆಯೊಂದರಲ್ಲಿ ಪ್ರಥಮ ಬಹುಮಾನ ಬಂದ ಬಗ್ಗೆಯೂ ತಿಳಿಸಿದರು. ಆ ಸ್ಪರ್ಧೆಯ ತೀರ್ಪುಗಾರರಲ್ಲಿ ಒಬ್ಬರು ಸುಪ್ರಸಿದ್ಧ ಸಾಹಿತಿ ಜೈನೇಂದ್ರ ಕುಮಾರ್. ಸಣ್ಣ ಕಥೆ ಬರೆಯುವುದರಲ್ಲಿ ನನಗೆ ಆಸಕ್ತಿ ಇರುವುದನ್ನು ಗಮನಿಸಿದ ವೈಷ್ಣವ್ ವಿಜ್ಞಾನ ವಿದ್ಯಾರ್ಥಿಯಾದ ನಾನು ವೈಜ್ಞಾನಿಕ ಕಥೆಗಳನ್ನೂ ಬರೆಯಬೇಕು ಎಂದು ಸಲಹೆ ನೀಡಿದರು.

ಹೀಗೆ ನಾನು ನನ್ನ ಮೊದಲ ವೈಜ್ಞಾನಿಕ ಕಥೆ **"ಶೈವಲ"** ಬರೆದೆ. ಅದರಲ್ಲಿ ವಿಜ್ಞಾನಿಯೊಬ್ಬ ತನ್ನ ಗೆಳೆಯರನ್ನು ಸರೋವರದ ಬಳಿ ಭೋಜನಕ್ಕೆಂದು ಕರೆದೊಯ್ಯುತ್ತಾನೆ. ಆ ಸರೋವರದಲ್ಲಿ ಬೆಳೆದ ಪಾಚಿಯಿಂದಲೇ ಎಲ್ಲ ತಿನಿಸನ್ನೂ ತಯಾರಿಸುತ್ತಾರೆ. ಈ ಕಥೆ 'ಪರ್ವತೀಯ' ಎನ್ನುವ ಪತ್ರಿಕೆಯಲ್ಲಿ ಪ್ರಕಟವಾಯಿತು. ಆಮೇಲೆ, ಆಲ ಹಾಗೂ ಅರಳೀ ಮರದಲ್ಲಿ ಭೂತಗಳು ಇರುತ್ತವೆ ಎನ್ನುವ ಜನರ ತಪ್ಪು ತಿಳುವಳಿಕೆಯನ್ನು ತಿದ್ದಲೆಂದು ನಾನು ***"ಪ್ರೇತ್ ಲೀಲ"*** ಎನ್ನುವ ಇನ್ನೊಂದು ಕಥೆ ಬರೆದೆ. 1965ರಲ್ಲಿ. ಇದು ಉತ್ತರ ಪ್ರದೇಶದ ಮಾಹಿತಿ ಮತ್ತು ಜನಸಂಪರ್ಕ ಇಲಾಖೆಯ ಪತ್ರಿಕೆ **"ತ್ರಿಪತಾಕಾ"** ದಲ್ಲಿ ಪ್ರಕಟವಾಗಿತ್ತು.

ಅದಾದ ಮೇಲೆ ನಾನು ಉದ್ಯೋಗಕ್ಕೆ ಸೇರಿದೆ. ಹಲವು ಕೆಲಸಗಳಲ್ಲಿ ಮಗ್ನನಾಗಿಬಿಟ್ಟೆ. 1976–77ನೇ ಇಸವಿಯಲ್ಲಿ ಸುಪ್ರಸಿದ್ಧ ಖಗೋಳವಿಜ್ಞಾನ ಕಾರ್ಲ್ ಸಗಾನರ ಸಲಹೆಯ ಮೇರೆಗೆ ನಮ್ಮ ಪ್ರಪಂಚದ ವಿಶಿಷ್ಟ ಸದ್ದುಗಳು, ದೃಶ್ಯಗಳನ್ನು ಒಳಗೊಂಡ ಸುವರ್ಣಮುದ್ರಿಕೆ, ಗೋಲ್ಡನ್ ರೆಕಾರ್ಡ್, ತಯಾರಿಸಿ, ವಾಯೇಜರ್–1 ಮತ್ತು ವಾಯೇಜರ್–2 ನೌಕೆಗಳಲ್ಲಿ ಕಳಿಸಲಾಯಿತು. ಅನ್ಯಲೋಕಗಳಲ್ಲಿರುವ ಬುದ್ಧಿಜೀವಿಗಳಿಗೆ ನಮ್ಮ ಬಗ್ಗೆ ತಿಳಿಸಲೆಂದು ಇದನ್ನು ಮಾಡಿದರು. ಇದು ನನ್ನ ಕಲ್ಪನೆಗೂ ಗರಿ ಮೂಡಿಸಿತು. ಬೇರೆ ಲೋಕದಲ್ಲಿರುವ ಯಾರ ಕೈಗೆ ಈ ಮುದ್ರಿಕೆ ಸಿಗಬಹುದೋ ಎಂದು ಯೋಚಿಸುತ್ತಾ ಕುಳಿತೆ.

ಅಂತಹ ಲೋಕದಲ್ಲಿ ಕೇವಲ ಬ್ಯಾಕ್ಟೀರಿಯಾ, ವೈರಸ್ಸು ಮತ್ತು ಕೀಟಗಳಷ್ಟೆ ಇದ್ದರೆ ಏನಾಗಬಹುದು? ಅಥವಾ ಮಂಗಗಳಂತಹ ಜೀವಿಗಳ ಕೈಗೆ ಈ ಮುದ್ರಿಕೆ ಸಿಕ್ಕರೆ ಏನಾದೀತು? ನಮ್ಮಂತಹ ಬುದ್ಧಿಜೀವಿಗಳೂ ಇರಬಹುದೋ? ನಮ್ಮಂತಹ ಅನ್ನುವುದು ಇರಲಿ. ನಮಗಿಂತಲೂ ಬುದ್ಧಿವಂತ ಜೀವಿಗಳು ಇರಬಹುದಲ್ಲವೇ? ಅಷ್ಟೆ. ಇದು ಇನ್ನೊಂದು ಕಥೆಯ ಬೀಜವನ್ನು ಮನಸ್ಸಿನಲ್ಲಿ ಬಿತ್ತಿತು. ಸಭ್ಯತಾ ಕೀ ಖೋಜ್, ನಾಗರೀಕತೆಯ ಹುಡುಕಾಟ, ಎನ್ನುವ ಕಿರುಕಾದಂಬರಿಯನ್ನು ಬರೆದೆ. ಇದು ಅಂದಿನ ದಿನಗಳಲ್ಲಿ ಸುಪ್ರಸಿದ್ಧವೆನಿಸಿದ್ದ ಸಾಪ್ತಾಹಿಕ ಹಿಂದೂಸ್ತಾನ್ ಪತ್ರಿಕೆಯಲ್ಲಿ, 1979ರಲ್ಲಿ ಪ್ರಕಟವಾಯಿತು. ಅದರ ಸಂಪಾದಕ ಮನೋಹರ ಶ್ಯಾಮ ಜೋಷಿ. ದೂರದೊಂದು ಗ್ರಹದಲ್ಲಿ ರಾರಾಜಿಸುತ್ತಿದ್ದ ನಾಗರೀಕತೆಯೊಂದು ತಾನೇ ಸೃಷ್ಟಿಸಿದ ಬುದ್ಧಿವಂತ ಯಂತ್ರಮಾನವರಿಂದ ಸೋಲನ್ನಪ್ಪಿದ ಕಥೆ.

ಹೀಗೆ ವೈಜ್ಞಾನಿಕ ಕಥಾಕ್ಷೇತ್ರದಲ್ಲಿ ನನ್ನ ಪಯಣ ಮುಂದುವರೆಯಿತು. ಅನಂತರ ನಾನು ಬರೆದ ಇನ್ನೊಂದು ದೀರ್ಘಕಥೆ "ಭವಿಷ್ಯ" ಕೂಡ ಸಾಪ್ತಾಹಿಕ ಹಿಂದೂಸ್ತಾನ್ ನಲ್ಲಿಯೇ ಪ್ರಕಟವಾಯಿತು. ಲಕ್ನೋ ಪ್ರಕಟಣೆಯಾದ ಅಮೃತ ಪ್ರಭಾತ್ ಪತ್ರಿಕೆಯ ದೀಪಾವಳಿ ವಿಶೇಷಾಂಕದಲ್ಲಿ **"ಗುಡ್ ಬೈ ಮಿಸ್ಟರ್ ಖನ್ನಾ"** ಎನ್ನುವ ಕಥೆ ಪ್ರಕಟವಾಯಿತು. ಇವನ್ನು ರಾಷ್ಟ್ರೀಯ ಪುಸ್ತಕ ಪ್ರತಿಷ್ಠಾನ, ಎನ್‌ಬಿಟಿ, ಪ್ರಕಟಿಸಿರುವ, ಸುಪ್ರಸಿದ್ಧ ವೈಜ್ಞಾನಿಕ ಕಥೆಗಾರ ಡಾ. ಬಾಳ ಫೋಂಡ್ಕೆ ಸಂಪಾದಿಸಿರುವ "ಬೀತಾ ಹುವಾ ಭವಿಷ್ಯ" ಸಂಕಲನದಲ್ಲಿ ಸೇರಿಸಿದ್ದಾರೆ. ಹೀಗೆ ಪ್ರತಿಯೊಂದು ವೈಜ್ಞಾನಿಕ ಕಥೆಯ ಹಿಂದೆಯೂ ಒಂದೊಂದು ಕಥೆ ಇದೆ."

● **ನಿಮಿಷ್ ಕಪೂರ್:** *ವೈಜ್ಞಾನಿಕ ಕಥೆಗಳು ವಿಜ್ಞಾನ ಸಂವಹನದಲ್ಲಿ ಸಹಕಾರಿಯೇ? ನಿಮ್ಮ ಅನಿಸಿಕೆಗಳೇನು?*

**ಮೇವಾಡಿ:** ವೈಜ್ಞಾನಿಕ ಕಥೆಗಳು ಕೂಡ ವಿಜ್ಞಾನ ಸಂವಹನಕ್ಕೆ ಸಮರ್ಥ ಹಾಗೂ ಸಹಜ ಮಾರ್ಗಗಳೇ. ಇವುಗಳ ಮೂಲಕ ಓದುಗರಿಗೆ ವಿಜ್ಞಾನದ ಹಲವು ಸಾಧ್ಯತೆಗಳ ಪರಿಚಯ ಸುಲಭವಾಗಿ ಆಗುತ್ತದೆ. ಸುಪ್ರಸಿದ್ಧ ಖಭೌತವಿಜ್ಞಾನಿ ಹಾಗೂ ವೈಜ್ಞಾನಿಕ ಕಥೆಗಾರರಾದ ಡಾ. ಜಯಂತ್ ವಿಷ್ಣು ನಾರಳೀಕರ್ ವೈಜ್ಞಾನಿಕ ಕಥೆಗಳನ್ನು ಪ್ರಭಾವೀ ಸಂವಹನ ಮಾಧ್ಯಮಗಳು ಎಂದಿದ್ದಾರೆ. ಲೇಖನ ಅಥವಾ ಪಠ್ಯಗಳ ಮೂಲಕ ವಿವರಿಸಲು ಕಷ್ಟವೆನ್ನಿಸುವಂತಹ ವೈಜ್ಞಾನಿಕ ಸತ್ಯಗಳು ಹಾಗೂ ಅಂಶಗಳನ್ನು ಕಥೆಗಳನ್ನು ಓದುವಾಗ ಓದುಗರು ಸುಲಭವಾಗಿ ತಿಳಿಯಬಲ್ಲರು. ಈ ಕ್ಷೇತ್ರವನ್ನು ವಿಜ್ಞಾನ ಸಂವಹನೆಗಾಗಿ

ಹೆಚ್ಚೆಚ್ಚು ಬಳಸಬೇಕಿದೆ. ವೈಜ್ಞಾನಿಕ ಕಥೆಗಳನ್ನು ಓದಿ, ಅಥವಾ ಕೇಳಿ, ವಿಜ್ಞಾನದ ಅರಿವನ್ನು ಸಮರ್ಥವಾಗಿ ಸಂವಹಿಸಬಹುದು ಎನ್ನುವುದು ನನ್ನ ಅನಿಸಿಕೆ. ವೈಜ್ಞಾನಿಕ ಕಥೆಗಳನ್ನು ಆಧರಿಸಿದ ವೀಡಿಯೋಗಳು, ಆಡಿಯೋ ಕಾರ್ಯಕ್ರಮಗಳು, ಕಾಮಿಕ್ಸ್ ಗಳು ಈ ನಿಟ್ಟಿನಲ್ಲಿ ಸಾಕಷ್ಟು ಫಲ ನೀಡಬಲ್ಲುವು."

● **ನಿಮಿಷ್ ಕಪೂರ್:** *ಹಿಂದಿ ವೈಜ್ಞಾನಿಕ ಕಥಾಕ್ಷೇತ್ರದ ಬಗ್ಗೆ ನಿಮ್ಮ ಅಭಿಪ್ರಾಯಗಳೇನು? ಹಿಂದಿಯಲ್ಲಿ ಇಂತಹ ಕಥೆಗಳ ಕೊರತೆ ಇದೆಯೇ? ಇದೆಯಾದರೆ ಕಾರಣವೇನಿರಬಹುದು?*

**ಮೇವಾಡಿ:** ಹಿಂದಿಯಲ್ಲಿ ವೈಜ್ಞಾನಿಕ ಕಥೆಗಳನ್ನು ಬರೆಯಲು ವಿಪುಲ ಅವಕಾಶಗಳಿವೆ. ನಾಳಿನ ದಿನಗಳು ವೈಜ್ಞಾನಿಕ ಕಥೆಗಳದ್ದೇ ಅಂತ ನಾನು ಖಂಡಿತವಾಗಿ ಹೇಳಬಲ್ಲೆ. ಏಕೆಂದರೆ ಈಗ ವಿಜ್ಞಾನ ಮತ್ತು ತಂತ್ರಜ್ಞಾನ ನಿತ್ಯವೂ ನಮ್ಮ ಬದುಕನ್ನು ಗಾಢವಾಗಿ ಪ್ರಭಾವಿಸುತ್ತಿವೆ. ವಿಜ್ಞಾನ ಮತ್ತು ತಂತ್ರಜ್ಞಾನದ ಹೊಸ ಶೋಧಗಳಿಂದಾಗಿ ಜೀವನಶೈಲಿ, ಸಂಬಂಧಗಳು ಕೂಡ ಬದಲಾಗುತ್ತಿವೆ. ಅಷ್ಟೇ ಅಲ್ಲ. ನಮ್ಮ ಪರಿಸರದ ಮೇಲೂ ಪ್ರಭಾವ ಇದೆ. ಹಲವು ದೇಶಗಳು ಹೊಸ, ಹೊಸ ಮಾರಕಾಸ್ತ್ರಗಳನ್ನು ಸೃಷ್ಟಿಸುತ್ತಿವೆ. ರೋಬಾಟುಗಳು ಈಗ ಕಾರ್ಖಾನೆಯಲ್ಲಿ ಮಾತ್ರವಲ್ಲ, ಹೋಟೆಲುಗಳು, ಶಾಲೆಗಳು, ಕಾಲೇಜುಗಳಲ್ಲಿಯೂ ಕೆಲಸ ಮಾಡುತ್ತಿವೆ. ನಾಳೆಗಳು ಹೀಗೆಯೇ ಬದಲಾಗುತ್ತಲೇ ಇರುತ್ತವಷ್ಟೆ. ಸುಪ್ರಸಿದ್ಧ ಕಥೆಗಾರ ಐಸಾಕ್ ಅಸಿಮೋವ್ ತನ್ನ ಒಂದು ಲೇಖನದಲ್ಲಿ ಹೀಗೆ ಹೇಳಿದ್ದ. ಆತ ಮತ್ತು ಆತನ ಸಹೋದ್ಯೋಗಿಗಳು ಕಳೆದ ಶತಮಾನದ ಮೂರನೆಯ ದಶಕದಲ್ಲಿ ಕಲ್ಪಿಸಿಕೊಂಡಿದ್ದ ಭವಿಷ್ಯ ಲೋಕ ಎಪ್ಪತ್ತನೆಯ ದಶಕದಲ್ಲಿ ನನಸೇ ಆಗಿಬಿಟ್ಟಿತ್ತು ಅಂತ. ಆತ ಹೇಳಿದ್ದು ನಿಜ. ಹೀಗೆ ಇಂದು ನಾವು ಬರೆಯುವ ವೈಜ್ಞಾನಿಕ ಕಥೆಗಳು ನಾಳೆಯ ಲೋಕವನ್ನು ತೆರೆದಿಡಬಲ್ಲುವು.

'ಕಳೆದ 100–150 ವರ್ಷಗಳಿಂದಲೂ ಹಿಂದಿಯಲ್ಲಿ ವೈಜ್ಞಾನಿಕ ಕಥೆಗಳು ಪ್ರಕಟವಾಗುತ್ತಿದ್ದರೂ, ಮೊದಲೆರಡು ದಶಕಗಳಲ್ಲಿ ಬೆಳಕು ಕಂಡಂಥವು ಬಹಳ ಕಡಿಮೆ. ಹಿಂದಿಯ ಮೊದಲ ವೈಜ್ಞಾನಿಕ ಕಥೆ, *"ಚಂದ್ರಲೋಕ ಕಿ ಯಾತ್ರಾ"* (ಚಂದ್ರಲೋಕಕ್ಕೆ ಪ್ರವಾಸ)ವನ್ನು ಕೇಶವ ಪ್ರಸಾದ ಸಿಂಗ್ ಬರೆದು, ಸರಸ್ವತಿ ಎನ್ನುವ ಪತ್ರಿಕೆಯಲ್ಲಿ 1900ನೇ ಇಸವಿಯಲ್ಲಿಯೇ ಪ್ರಕಟಿಸಿದ್ದರು. 1922ರಲ್ಲಿ *'ಬೀಸ್ವೀಂ ಸದಿ'* (ಇಪ್ಪತ್ತನೆಯ ಶತಮಾನ) ಎನ್ನುವ ಭವಿಷ್ಯದ ಕಥೆಯನ್ನು ರಾಹುಲ್ ಸಾಂಕೃತ್ಯಾಯನ ಪ್ರಕಟಿಸಿದ್ದರು. ಹಿಂದಿಯಲ್ಲಿ ವೈಜ್ಞಾನಿಕ ಕಥೆಗಳ ಕೊರತೆಯ ಬಗ್ಗೆ ಕಾಳಜಿ ವ್ಯಕ್ತಪಡಿಸಿದ ಡಾ. ಸಂಪೂರ್ಣಾನಂದ, 'ಪೃಥ್ವಿ ಸೆ ಸಪ್ತರ್ಷಿ ಮಂಡಲ್' (ಭೂಮಿಯಿಂದ ಸಪ್ತರ್ಷಿ ಮಂಡಲದವರೆಗೆ) ಎನ್ನುವ ಕಾದಂಬರಿಯನ್ನು ಬರೆದರು. ಆಚಾರ್ಯ ಚತುರ್ ಸೇನ್ ಶಾಸ್ತ್ರಿಯವರು 1950ರಲ್ಲಿ ಪ್ರಪಂಚದ ಎರಡು ಬೃಹತ್ ದೇಶಗಳ ನಡುವೆ ಇದ್ದ ಶೀತಲ ಸಮರದ ಹಿನ್ನೆಲೆಯಲ್ಲಿ 'ಖಗ್ರಾಸ', (ಪೂರ್ಣ ಗ್ರಹಣ) ಎನ್ನುವ ಕಾದಂಬರಿಯನ್ನು ರಚಿಸಿದ್ದರು. ಇದಕ್ಕೂ ಮುನ್ನ, ಮೂರನೆಯ ದಶಕದಲ್ಲಿಯೇ, ಡಾ. ನವಲ್ ಬಿಹಾರಿ ಮಿಶ್ರಾ, ಯಮುನಾದತ್ತ ವೈಷ್ಣವ್ 'ಅಶೋಕ' ಮತ್ತು ಬ್ರಜಮೋಹನ್ ಗುಪ್ತಾ ವೈಜ್ಞಾನಿಕ ಕಥಾಕ್ಷೇತ್ರಕ್ಕೆ ಸಾಕಷ್ಟು ಕೊಡುಗೆ ನೀಡಿದ್ದರು. ಅಲ್ಲಿಂದ ಮುಂದೆ, ಐವತ್ತು ಹಾಗೂ ಅರವತ್ತರ ದಶಕಗಳಲ್ಲಿ ಬಹಳಷ್ಟು ವೈಜ್ಞಾನಿಕ ಕಥೆಗಳು ಹಿಂದಿಯಲ್ಲಿ ಪ್ರಕಟವಾಗಿದ್ದುವು. ಈ ಪರಂಪರೆ ಮುಂದುವರೆದಿದೆ. ಇಪ್ಪತ್ತೊಂದನೆಯ ಶತಮಾನದ ಹಿಂದಿಯ ವೈಜ್ಞಾನಿಕ ಕಥೆಗಾರರು ಉತ್ಕೃಷ್ಟ ಕಥೆಗಳನ್ನು ಬರೆಯುತ್ತಿದ್ದಾರೆ. ಹಿಂದಿ ವೈಜ್ಞಾನಿಕ ಸಾಹಿತ್ಯ ಭಂಡಾರ ಸಮೃದ್ಧವಾಗುತ್ತಿದೆ.

"ಭಾಷೆ ಯಾವುದೇ ಇರಲಿ. ವೈಜ್ಞಾನಿಕ ಕಥೆಗಳು ಪ್ರಬಲವಾಗಿರಲೂ ಬಹುದು. ಅಸಮರ್ಥವೂ ಆಗಿರಬಹುದು. ಇಂದು ರಚನೆಯಾಗುತ್ತಿರುವ ಹಿಂದಿ ವೈಜ್ಞಾನಿಕ ಕಥೆಗಳಲ್ಲಿ ಬಹಳಷ್ಟು ಸಮರ್ಥ ಕಥೆಗಳು. ಹೊಸ ಕಥೆಗಾರರು ವಿನೂತನ ಕಲ್ಪನೆಗಳನ್ನು ಆಧರಿಸಿ ಹುರುಪಿನಿಂದ ಒಳ್ಳೆಯ ಕಥೆಗಳನ್ನು ರಚಿಸುತ್ತಿದ್ದಾರೆ.

"ಹಿಂದಿಯಲ್ಲಿ ವೈಜ್ಞಾನಿಕ ಕಥೆಗಳಿಗೆ ಪ್ರೋತ್ಸಾಹ ನೀಡಬೇಕು. ಎಲ್ಲ ಬಗೆಯಿಂದಲೂ ಪ್ರೋತ್ಸಾಹ ಬೇಕಾಗಿದೆ. ಅವುಗಳ ಪ್ರಕಟಣೆಗೆ ಪ್ರಕಾಶಕರು ಮುಂದಾಗಬೇಕು. ಇವನ್ನು ಶಾಲಾ ಮಟ್ಟದಲ್ಲಿಯೇ ಪಠ್ಯ ಪುಸ್ತಕಗಳಲ್ಲಿ ಸೇರಿಸಬೇಕು. ವೈಜ್ಞಾನಿಕ ಕಥೆಗಳ ಬರವಣಿಗೆ ಕುರಿತಂತೆ ಗಂಭೀರವಾಗಿ ಚರ್ಚಿಸುವ ಸೆಮಿನಾರುಗಳು, ಕಮ್ಮಟಗಳ ಅವಶ್ಯಕತೆ ಇದೆ. ಒಳ್ಳೆಯ ವೈಜ್ಞಾನಿಕ ಕಥೆಗಳನ್ನು ಆಧರಿಸಿದ ಚಲನಚಿತ್ರಗಳು, ಟೆಲಿಫಿಲ್ಮುಗಳು, ಟೆಲಿವಿಷನ್ ಧಾರಾವಾಹಿಗಳನ್ನು ನಿರ್ಮಿಸಬೇಕಿದೆ. . ಉತ್ತಮ ವೈಜ್ಞಾನಿಕ ಕಥೆಗಳಿಗೆ ಬಹುಮಾನ ನೀಡಬೇಕಿದೆ. ಇದು ಈ ಸಾಹಿತ್ಯ ಪ್ರಕಾರವನ್ನು ಪ್ರೋತ್ಸಾಹಿಸುವುದಷ್ಟೆ ಅಲ್ಲ, ಅದರ ಪ್ರತಿಷ್ಠೆಯನ್ನೂ ಹೆಚ್ಚಿಸುವುದು. ಪ್ರಪಂಚದ ಇತರೆಡೆಗಳಲ್ಲಿ ವೈಜ್ಞಾನಿಕ ಸಾಹಿತ್ಯಕ್ಕಾಗಿಯೇ ಹ್ಯೂಗೋ, ನೆಬುಲಾ ಮೊದಲಾದ ಪ್ರಶಸ್ತಿಗಳನ್ನು ನೀಡುತ್ತಾರೆ."

ಹಿಂದಿಯಲ್ಲಿ ವೈಜ್ಞಾನಿಕ ಕಥೆಗಳನ್ನು ಬರೆಯಲು ವಿಪುಲ ಅವಕಾಶಗಳಿವೆ. ನಾಳಿನ ದಿನಗಳು ವೈಜ್ಞಾನಿಕ ಕಥೆಗಳದ್ದೇ ಅಂತ ನಾನು ಖಂಡಿತವಾಗಿ ಹೇಳಬಲ್ಲೆ. ಏಕೆಂದರೆ ಈಗ ವಿಜ್ಞಾನ ಮತ್ತು ತಂತ್ರಜ್ಞಾನ ನಿತ್ಯವೂ ನಮ್ಮ ಬದುಕನ್ನು ಗಾಢವಾಗಿ ಪ್ರಭಾವಿಸುತ್ತಿವೆ. ವಿಜ್ಞಾನ ಮತ್ತು ತಂತ್ರಜ್ಞಾನದ ಹೊಸ ಶೋಧಗಳಿಂದಾಗಿ ಜೀವನಶೈಲಿ, ಸಂಬಂಧಗಳು ಕೂಡ ಬದಲಾಗುತ್ತಿವೆ. ಅಷ್ಟೇ ಅಲ್ಲ. ನಮ್ಮ ಪರಿಸರದ ಮೇಲೂ ಪ್ರಭಾವ ಇದೆ.

● **ನಿಮಿಷ್ ಕಪೂರ್:** *ಹೊಸ ವೈಜ್ಞಾನಿಕ ಕಥೆಗಾರರಿಗೆ ನಿಮ್ಮ ಸಲಹೆ ಏನು? ಹೊಸಬರು ಬರೆಯಲು ಪ್ರೇರಣೆ ನೀಡುವಂತೆ ಪ್ರಕಾಶಕರು ಹಾಗೂ ಸಂಸ್ಥೆಗಳು ಏನು ಮಾಡಬಹುದು?*

**ಮೇವಾಡಿ:** ಪ್ರತಿಯೊಬ್ಬ ಲೇಖಕನ ಬರವಣಿಗೆಯ ಕ್ರಿಯೆಯೂ ವಿಭಿನ್ನ. ಆದ್ದರಿಂದ ಹೊಸ ಲೇಖಕರಿಗೆ ನಾನು ಹೇಳುವುದು ಇಷ್ಟೆ. ವಿಜ್ಞಾನ ಹಾಗೂ ತಂತ್ರಜ್ಞಾನ ಮಾನವ ಸಮಾಜವನ್ನು ಇಂದೋ, ನಾಳೆಯೋ ಹೇಗೆ ಪ್ರಭಾವಿಸಬಹುದು ಎನ್ನುವ ಬಗ್ಗೆ ಕಲ್ಪಿಸಿ, ಕಥೆ ಬರೆಯಿರಿ. ನಿಮ್ಮದೇ ಚಿಂತನೆ, ಕಲ್ಪನೆಗಳಿರುವ ಒಳ್ಳೆಯ ವೈಜ್ಞಾನಿಕ ಕಥೆಗಳನ್ನು ಹೇಳಿ. ಬೇರಾವುದೇ ಕಥೆ ಅಥವಾ ವಿದೇಶೀ ಕಥೆಗಳ ಪ್ರಭಾವ ಇರುವಂಥದ್ದು ಅಲ್ಲ. ಬೇರೆ ಲೇಖಕರ ಕಥೆಗಳನ್ನು ಓದಬೇಡಿ ಎನ್ನುತ್ತಿಲ್ಲ. ಓದಿ. ಆದರೆ ಕಥೆ ನಿಮ್ಮ ಸ್ವಂತ ಕಲ್ಪನೆಯದ್ದಾಗಿರಲಿ. ಇನ್ನೊಂದು ಮಾತು. ನಮ್ಮ ದೇಶ, ನಮ್ಮ ಕಾಲಕ್ಕೆ ಒಗ್ಗುವಂತಹ, ನಮ್ಮದೇ ಪರಿಸರದಲ್ಲಿ ಘಟಿಸುವ ಕಥೆಗಳನ್ನು ಸೃಷ್ಟಿಸಬೇಕು. ಇಂತಹವು ನಮಗೊಂದು ಅಸ್ಮಿತೆಯನ್ನು ಕೊಡುವುದಲ್ಲದೆ, ಭಾರತೀಯ ವೈಜ್ಞಾನಿಕ ಕಥೆಗಳು ಎನ್ನಿಸಿಕೊಳ್ಳುತ್ತವೆ. ಕಥೆಗಳ ಸ್ಥಾನ ವಿದೇಶವೋ, ಬೇರೆ ಲೋಕವೋ ಆದಾಗಲೂ ಅಲ್ಲಿ ಭಾರತೀಯ ಪಾತ್ರಗಳೇ ಇದ್ದರೆ, ಅದಕ್ಕೊಂದು ಭಾರತೀಯತೆಯ ಮೆರುಗು ಸಿಗುತ್ತದೆ. ಹಾಗಂತ ವಿದೇಶೀ ಕಥೆಗಳನ್ನು ಓದಬಾರದು ಅಂತಲ್ಲ. ಅವು ನಿಮ್ಮ ಕಲ್ಪನೆಗಳಿಗೆ ಹೊಸ ಗರಿ ಮೂಡಿಸಬಹುದು. ಆದರೆ ಬರೆಯುವಾಗ ಆ ಕಲ್ಪನೆಗಳು ನಿಮ್ಮ ಸ್ವಂತದ್ದೇ ಆಗಿರಲಿ. ನಿಮ್ಮ ಸ್ವಂತ ಕಥೆಯಾಗಿರಲಿ. ವೈಜ್ಞಾನಿಕ ಕಥೆಗಳನ್ನು ಹುರುದುಂಬಿಸುವುದು ಹೇಗೆ ಅಂತ ಆಗಲೇ ಹೇಳಿದೆನಲ್ಲ!

● **ನಿಮಿಷ್ ಕಪೂರ್:** *ಒಳ್ಳೆಯ ವೈಜ್ಞಾನಿಕ ಕಥೆಯ ಗುಣಗಳೇನು?*

**ಮೇವಾಡಿ:** "ಮೊದಲಿಗೆ ಆ ವಿಭಾಗಕ್ಕೆಂದೇ ಬರೆದ ಕಥೆ ಆಗಿರಬೇಕು. ಅಂದರೆ ವಿಜ್ಞಾನದ ಬಗ್ಗೆ ಕಥೆ ಬರೆದರೂ, ಲೇಖಕನಿಗೆ ಕಥೆ ಹೇಳುವ ಕಲೆ ಗೊತ್ತಿರಬೇಕು. ಆದ್ದರಿಂದ ಮೊದಲು ಕಥೆ ಬರೆಯುವುದನ್ನು ಅಭ್ಯಾಸ ಮಾಡುವುದು ಒಳ್ಳೆಯದು. ಅನಂತರ, ವೈಜ್ಞಾನಿಕ ಕಥೆಗಳನ್ನು ಬರೆಯುವುದು, ಅಥವಾ ಯಾವುದೇ ವಿಜ್ಞಾನಾಧಾರಿತ ಘಟನೆಗಳನ್ನು ಕಲ್ಪಿಸುವ ಸಮಯದಲ್ಲಿಯೇ ಅವುಗಳಲ್ಲಿ ಭಾವುಕತೆಯೂ ತುಂಬುವಂತೆ ಮಾಡಬೇಕು. ಹೂರಣ ವಿಜ್ಞಾನದ್ದೇ ಆದರೂ ಭಾವನೆಗಳು ಇರಬೇಕು. ಕೇವಲ ಕೆಲವು ಪಾತ್ರಗಳು ವಿಜ್ಞಾನದ ಅಂಶಗಳನ್ನೋ, ಸೂತ್ರಗಳನ್ನೋ ವಿವರಿಸುವುದು ವೈಜ್ಞಾನಿಕ ಕಥೆ ಆಗುವುದಿಲ್ಲ. ಅದು ತರಗತಿಯಲ್ಲಿ ಪಾಠ ಹೇಳಿದಂತೆ ಅನಿಸುತ್ತದೆ.

"ವೈಜ್ಞಾನಿಕ ಕಥೆಗಳನ್ನು ಬರೆಯುವಾಗಲೂ ಕಥೆಗಳ ಸ್ವರೂಪವನ್ನು ಗಮನದಲ್ಲಿಟ್ಟುಕೊಳ್ಳುವುದು ಸಂಪ್ರದಾಯ. ಆದರೆ ಇತ್ತೀಚೆಗೆ ಈ ಸಾಹಿತ್ಯ ಪ್ರಕಾರದಲ್ಲಿಯೂ ಹಲವು ಪ್ರಯೋಗಗಳು ನಡೆದಿವೆ. ಕಥೆಗಳ ಸ್ವರೂಪವನ್ನು ಇಟ್ಟುಕೊಂಡೇ, ಹೊಸ ಶೈಲಿಗಳನ್ನೂ, ಹೊಸ ಬರೆವಣಿಗೆಯ ತಂತ್ರಗಳನ್ನು ರೂಪಿಸಲೂ ವೈಜ್ಞಾನಿಕ ಕಥೆಗಾರರು ಪ್ರಯತ್ನಿಸಿದ್ದಾರೆ. ಪ್ರಪಂಚದಲ್ಲಿ ಇತರೆ ದೇಶಗಳಲ್ಲಿನ ಕಥೆಗಳನ್ನು ಓದಿದಾಗ ಇವು ಅರ್ಥವಾಗುತ್ತವೆ."

● **ನಿಮಿಷ್ ಕಪೂರ್:** *ವೈಜ್ಞಾನಿಕ ಕಥೆ ಬರೆಯಲು ಎಂತಹ ಸಿದ್ಧತೆಗಳು ಬೇಕು? ಭಾರತೀಯ ವೈಜ್ಞಾನಿಕ ಕಥೆಗಾರರು ಇಂತಹ ಸಿದ್ಧತೆಗಳನ್ನು ಮಾಡುವುದು ಕಡಿಮೆ ಎನ್ನಿಸುತ್ತದೆಯೇ?*

**ಮೇವಾಡಿ:** "ವೈಜ್ಞಾನಿಕ ಕಥೆಗಳು ಸೃಜನಶೀಲ ಕೃತಿಗಳು. ಇದನ್ನು ಸಾಧಿಸಬೇಕೆಂದರೆ ಸಾಕಷ್ಟು ಓದಿರಲೂ ಬೇಕು, ಕಲಿತಿರಲೂ ಬೇಕು. ಕೇಳಿರಲೂ ಬೇಕು. ಆಮೇಲೆ ವಿಜ್ಞಾನ ಮತ್ತು ತಂತ್ರಜ್ಞಾನವು ಮಾನವ ಸಮಾಜದ ಮೇಲೆ ಎಂತ ಪ್ರಭಾವ ಬೀರಬಹುದು ಎಂದು ಯೋಚಿಸುವುದೂ ಮುಖ್ಯ. ಹೀಗೆ ಮನಸ್ಸಿನಲ್ಲಿಯೇ ಕಥೆಯ ಹಂದರವನ್ನು ರೂಪಿಸಿಕೊಳ್ಳಬಹುದು. ಉದಾಹರಣೆಗೆ, ವಾಯೇಜರ್–1 ಮತ್ತು ವಾಯೇಜರ್–2 ನೌಕೆಗಳಲ್ಲಿ ಸುವರ್ಣ ಮುದ್ರಿಕೆಗಳನ್ನು ಕಳಿಸಿದ್ದನ್ನು ಓದಿದ ಮೇಲೆ ಸುಮಾರು ಒಂದೂವರೆ ವರ್ಷಗಳ ಕಾಲ ನಾನು ಅದರ ಬಗ್ಗೆಯೇ ಚಿಂತಿಸುತ್ತಿದ್ದೆ. ಎಲ್ಲೆಲ್ಲೋ ಅಲೆದ ಮನಸ್ಸು ಕೊನೆಗೆ ಸಭ್ಯತಾ ಕೀ ಖೋಜ್ ಕಥೆಯ ಬೀಜ ಮೊಳೆಯಿತು. ಕಥೆಯ ಹಂದರ ಸ್ಪಷ್ಟವಾಯಿತು. ಇನ್ನೊಮ್ಮೆ, ಗುಣಪಡಿಸಲಾಗದ ಕ್ಯಾನ್ಸರ್

**ನಮ್ಮ ದೇಶದಲ್ಲಿ ಮೊತ್ತ ಮೊದಲ ವೈಜ್ಞಾನಿಕ ಕಥೆ ಬಹುಶಃ 1900ರಲ್ಲಿ ಪ್ರಕಟವಾಯಿತು. ಚೀನಾದಲ್ಲಿ 1904ರಲ್ಲಿ. ಆದರೆ ಚೀನಾದಲ್ಲಿ ಹಳ್ಳಿ, ಹಳ್ಳಿಗಳಲ್ಲಿ ವೈಜ್ಞಾನಿಕ ಕಥಾ ಸಂಘಗಳನ್ನು ಕಟ್ಟಿ ಅಂದಿನಿಂದಲೂ ಈ ಕಥಾಪ್ರಕಾರವನ್ನು ಪೋಷಿಸಲಾಯಿತು**

ಇದ್ದ ರೋಗಿಯೊಬ್ಬನ ಶವವನ್ನು ಶೈತ್ಯೀಕರಿಸಿದ ಸುದ್ದಿಯನ್ನು ಕೇಳಿದ ನಾನು ಆತ ನಾಳೆ ಎಂದಾದರೂ ಎಚ್ಚರಗೊಂಡರೆ ಎಂಬ ಯೋಚನೆ ಬಂತು. ಅದಕ್ಕೆ ಉತ್ತರವಾಗಿ, ಭವಿಷ್ಯ ಎನ್ನುವ ಕಥೆ ಬರೆದೆ. ಅದೇ ರೀತಿಯಲ್ಲಿ 1960ರ ದಶಕದಲ್ಲಿ ಮನುಷ್ಯ ಸೃಷ್ಟಿಯ ಕೆಲಸದಲ್ಲಿ ಮೂಗು ತೂರಿಸುತ್ತಿರುವನೇ ಎಂಬ ಪ್ರಶ್ನೆಯನ್ನು ವೈಜ್ಞಾನಿಕ ಪತ್ರಿಕೆಗಳು ಕೇಳುತ್ತಿದ್ದುವು. ಮಾನವ ದೇವನಾಗಬಲ್ಲನೇ? 1978ರಲ್ಲಿ ಪ್ರಪಂಚದ ಮೊತ್ತ ಮೊದಲ ಪ್ರನಾಳ ಶಿಶು ಲೂಯಿ ಬ್ರೌನಳ ಜನ್ಮವಾಯಿತು. ಅಂದಿನಿಂದ ಲಕ್ಷಾಂತರ ಪ್ರನಾಳ ಶಿಶುಗಳು ಪ್ರಪಂಚದಾದ್ಯಂತ ಹುಟ್ಟಿವೆ. ವಿಜ್ಞಾನದ ಈ ಸಾಧನೆಯಿಂದಾಗಿ, "ಬಾಡಿಗೆ ಗರ್ಭ"ದ ಸಮಸ್ಯೆಯನ್ನು




ಸಮಾಜ ಎದುರಿಸಬೇಕಾಯಿತು. ಈ ಮಾನವೀಯ ಸಮಸ್ಯೆಯನ್ನು ಕೇಂದ್ರವಾಗಿಟ್ಟುಕೊಂಡು 'ಕೋಖ್' (ಗರ್ಭ) ಎನ್ನುವ ಕಥೆಯನ್ನು ಬರೆದಿದ್ದೆ.

"ನನ್ನ ಮಟ್ಟಿಗೆ ಪ್ರತಿಯೊಬ್ಬ ವೈಜ್ಞಾನಿಕ ಕಥೆಗಾರನಿಗೂ ಸ್ವಲ್ಪ ಸಿದ್ಧತೆ ಬೇಕು. ಮನಸ್ಸಿನ ತುಮುಲ ಅಂತ ಬೇಕಿದ್ದರೂ ಹೇಳಬಹುದು."

● **ನಿಮಿಷ್ ಕಪೂರ್:** *ಇಂಗ್ಲೀಷಿನ ವೈಜ್ಞಾನಿಕ ಕಥೆಗಳಿಗೆ ವಿದೇಶಗಳಲ್ಲಿ ಇರುವ ಹಾಗೆ ನಮ್ಮ ದೇಶದಲ್ಲಿ, ಭಾರತೀಯ ಭಾಷೆಗಳಲ್ಲಿ ವಿಶೇಷವಾಗಿ, ವೈಜ್ಞಾನಿಕ ಕಥೆಗಳಿಗೇಕೆ ಅಷ್ಟೊಂದು ಸ್ಥಾನ–ಮಾನವಿಲ್ಲ?*

**ಮೇವಾಡಿ:** "ನಿಜ ಹೇಳಬೇಕೆಂದರೆ ಹಿಂದಿಗಿಂತ ಮರಾಠಿ, ಬೆಂಗಾಲಿ ಹಾಗೂ ಅಸಾಮೀ ಭಾಷೆಗಳಲ್ಲಿ ವೈಜ್ಞಾನಿಕ ಕಥೆಗಳು ಪ್ರಬಲವಾಗಿವೆ. ಆ ಭಾಷೆಗಳಲ್ಲಿ ಈ ಪ್ರಕಾರದ ಕಥೆಗಳನ್ನು ಬಹಳಷ್ಟು ಬರೆದಿದ್ದಾರೆ. ಬರೆಯುತ್ತಿದ್ದಾರೆ. ಆದರೆ ಇಂಗ್ಲೀಷಿನ ಅಥವಾ ವಿದೇಶೀ ವೈಜ್ಞಾನಿಕ ಕಥೆಗಳಿಗೆ ಭಾರತೀಯ ಭಾಷೆಗಳ ವೈಜ್ಞಾನಿಕ ಕಥೆಗಳನ್ನು ಹೋಲಿಸುವುದು ಸರಿಯಲ್ಲ. ಅಲ್ಲಿ ಸರ್ಕಾರಗಳು ಹಾಗೂ ಲೇಖಕರ ಸಂಘಟನೆಗಳು ಈ ಪ್ರಕಾರವನ್ನು ಎಲ್ಲ ಬಗೆಯಲ್ಲಿಯೂ ಪ್ರೋತ್ಸಾಹಿಸುತ್ತವೆ. ವೈಜ್ಞಾನಿಕ ಕಥಾ ಸಾಹಿತ್ಯಕ್ಕೆ ಮನ್ನಣೆಯಿದೆ. ಆದರೆ ಹಿಂದಿ ಸಾಹಿತ್ಯದ ಇತಿಹಾಸವನ್ನು ಗಮನಿಸಿದರೆ ಅದರಲ್ಲಿ ವೈಜ್ಞಾನಿಕ ಕಥೆಗಳ ಉಲ್ಲೇಖವೇ ಇರುವುದಿಲ್ಲ.

"ನಮ್ಮ ದೇಶದಲ್ಲಿ ಮೊತ್ತ ಮೊದಲ ವೈಜ್ಞಾನಿಕ ಕಥೆ ಬಹುಶಃ 1900ರಲ್ಲಿ ಪ್ರಕಟವಾಯಿತು. ಚೀನಾದಲ್ಲಿ 1904ರಲ್ಲಿ. ಆದರೆ ಚೀನಾದಲ್ಲಿ ಹಳ್ಳಿ, ಹಳ್ಳಿಗಳಲ್ಲಿ ವೈಜ್ಞಾನಿಕ ಕಥಾ ಸಂಘಗಳನ್ನು ಕಟ್ಟಿ ಅಂದಿನಿಂದಲೂ ಈ ಕಥಾಪ್ರಕಾರವನ್ನು ಪೋಷಿಸಲಾಯಿತು. ಅಲ್ಲಿ ಈಗ ವೈಜ್ಞಾನಿಕ ಕಥೆಗಳು ಸಮೃದ್ಧಿಯಾಗಿವೆ. 2004ನೇ ಇಸವಿಯಲ್ಲಿ ಚೀನಾ ವೈಜ್ಞಾನಿಕ ಕಥೆಗಳ ಶತಮಾನೋತ್ಸವವನ್ನೂ ಆಚರಿಸಿತು. ಆದರೆ ನಮ್ಮ ದೇಶದಲ್ಲಿ ಸಾಹಿತ್ಯ ಕ್ಷೇತ್ರದಲ್ಲಿ ಆ ಬಗ್ಗೆ ಯಾರೂ ಮಾತನ್ನೇ ಆಡಲಿಲ್ಲ."

● **ನಿಮಿಷ್ ಕಪೂರ್:** *ಪಾಶ್ಚಿಮಾತ್ಯ ದೇಶಗಳಲ್ಲಿ ಎಷ್ಟೊಂದು ವೈಜ್ಞಾನಿಕ ಚಲನಚಿತ್ರಗಳನ್ನು ನಿರ್ಮಿಸುತ್ತಾರೆ. ಅದೂ ಭಾರೀ ವೆಚ್ಚದೊಂದಿಗೆ.*
















*ಆದರೆ ನಮ್ಮ ದೇಶದಲ್ಲಿ ವೈಜ್ಞಾನಿಕ ಚಲನಚಿತ್ರಗಳು ಅಪರೂಪ. ಅಷ್ಟೇ ಅಲ್ಲ. ಅವುಗಳ ಗುಣಮಟ್ಟವೂ ವಿದೇಶೀ ಚಿತ್ರಗಳಿಗೆ ಹೋಲಿಸಿದರೆ ಕಡಿಮೆಯೇ? ಇದಕ್ಕೆ ಕಾರಣವೇನಿರಬಹುದು?*

**ಮೇವಾಡಿ:** ಇದಕ್ಕೆ ಮುಖ್ಯ ಕಾರಣ ಭಾರತೀಯ ಚಿತ್ರ ನಿರ್ಮಾಪಕರು ಚಲನಚಿತ್ರ ಮಾಡಲು ವೈಜ್ಞಾನಿಕ ಕಥೆಗಳನ್ನು ಆಯುವುದೇ ಇಲ್ಲ. ಪ್ರಪಂಚದ ಅತ್ಯುತ್ತಮ ನಿರ್ದೇಶಕ ಸ್ಟೀವನ್ ಸ್ಪೀಲ್ ಬರ್ಗರನ್ನೇ ತೆಗೆದುಕೊಳ್ಳಿ. ಆತ 'ಇಟಿ', 'ಟರ್ಮಿನೇಟರ್', 'ಜುರಾಸಿಕ್ ಪಾರ್ಕ್' ಮೊದಲಾದ ಹಲವು ವೈಜ್ಞಾನಿಕ ಕಥೆಗಳನ್ನಾಧರಿಸಿದ ಚಲನಚಿತ್ರಗಳನ್ನು ನಿರ್ದೇಶಿಸಿದ. ಆತನ ಇಟಿ,ಯ ಮೂಲಕಥೆಯನ್ನು ನಮ್ಮ ಸತ್ಯಜಿತ್ ರೇ ಬರೆದಿದ್ದರಂತೆ. ಆದರೆ ಅದೇ ವಿಷಯದ ಬಗ್ಗೆ *ಕೋಯಿ ಮಿಲ್ ಗಯಾ* ಎನ್ನುವ ಮಸಾಲೆ ಚಿತ್ರ ಮಾಡಿದರು. ಇಲ್ಲಿನವರು ವೈಜ್ಞಾನಿಕ ಕಥೆಗಳನ್ನು ಗಂಭೀರವಾಗಿ ಪರಿಗಣಿಸುವುದೇ ಇಲ್ಲ. ಭಾರತೀಯ ವೈಜ್ಞಾನಿಕ ಕಥೆಗಳಲ್ಲಿ ಒಳ್ಳೆಯ, ಸಫಲ ಚಲನಚಿತ್ರಗಳನ್ನು ನೀಡಬಲ್ಲಂಥವನ್ನು ಆಯ್ದುಕೊಳ್ಳಬಹುದಲ್ಲ!

ಈ ಬಗ್ಗೆ ಹಿಂದಿಯ ಯಾವುದೇ ನಿರ್ದೇಶಕರೂ ಗಂಭೀರವಾಗಿ ಚಿಂತಿಸಿ, ಚಲನಚಿತ್ರವನ್ನು ಮಾಡಿದರೆ ಖಂಡಿತ ಉತ್ತಮ ಗುಣಮಟ್ಟದ, ಸಫಲ ಚಿತ್ರವನ್ನು ನೀಡಬಹುದು."

● **ನಿಮಿಷ್ ಕಪೂರ್:** *ಒಳ್ಳೆಯ ವೈಜ್ಞಾನಿಕ ಕಥೆಗಳ ಗುರಿ ಏನು? ಓದುಗರಿಗೆ ಈ ಕಥೆಗಳು ಕೊಡುವ ಸಂದೇಶಗಳ ಬಗ್ಗೆ ಹೇಳಬಹುದಾ?*

**ಮೇವಾಡಿ:** "ಸತ್ಯ ಹೇಳಲೇ. ವೈಜ್ಞಾನಿಕ ಕಥೆಯನ್ನು ಬರೆಯುವಾಗ ಕಥೆಗಾರನ ಮನಸ್ಸಿನಲ್ಲಿ ಯಾವುದೇ ನಿರ್ದಿಷ್ಟ ಉದ್ದೇಶವೂ ಇರುವುದಿಲ್ಲ. ಆತ ತಾನು ಕಲ್ಪಿಸಿಕೊಂಡ ಒಂದು ಒಳ್ಳೆಯ ಕಥೆಯನ್ನು ಹೆಣೆಯಲಷ್ಟೆ ಪ್ರಯತ್ನಿಸಿರುತ್ತಾನೆ. ಆದರೆ ಅದು ಒಳ್ಳೆಯ ಕಥೆಯಾಗಿರಬೇಕು. ಇದಷ್ಟೆ ವೈಜ್ಞಾನಿಕ ಕಥೆಗಳ ಗುರಿ, ಉದ್ದೇಶವಾಗಿರಬೇಕು. ವೈಜ್ಞಾನಿಕ ಅಂಶಗಳ ಬಗ್ಗೆ ಜಾಗೃತಿ ಮೂಡಿಸುವದಕ್ಕಾಗಿ ಬರೆದಂಥವು ಉದ್ದೇಶಪೂರ್ವಕವಾಗಿ ತಿಣುಕಾಡಿದಂತೆ ತೋರುತ್ತವೆ. ಕಥೆ ಎಂದರೆ ಅದು ಮಾನವರು ಹಾಗೂ ಸಮಾಜದ ನಡುವಣ ಸಂಬಂಧಗಳನ್ನು, ಭಾವನೆಗಳನ್ನೂ, ತಿಕ್ಕಾಟಗಳನ್ನೂ ಹೇಳುವ ಪರಿ ಎಂದು ನಾನು ಅಂದುಕೊಂಡಿದ್ದೇನೆ. ಸಾಹಿತ್ಯದಲ್ಲಿನ ಕಥೆಗಳಂತೆಯೇ ವೈಜ್ಞಾನಿಕ ಕಥೆಗಳೂ ಮಾನವ ಮತ್ತು ಸಮಾಜಗಳ ನಡುವಣ ತೊಂದರೆಗಳನ್ನು, ಸಂಘರ್ಷಗಳನ್ನು ಓದುಗನ ಮುಂದಿಡಬೇಕು. ಸಾಹಿತ್ಯದ ಪ್ರತಿ ಕಥೆಯೂ ಹೇಗೆ ಒಂದು ಸಂದೇಶವನ್ನು ಮುಟ್ಟಿಸುತ್ತವೆಯೋ, ಹಾಗೆಯೇ ವೈಜ್ಞಾನಿಕ ಕಥೆಯೂ ಕೂಡ. ಮಾರಕ ಶಸ್ತ್ರಾಸ್ತ್ರಗಳು ತರಬಹುದಾದ ಭಯಾನಕ ಪರಿಸ್ಥಿತಿಗಳ ಬಗ್ಗೆ ವೈಜ್ಞಾನಿಕ ಕಥೆಗಾರರು ದೀರ್ಘ ಕಾಲದಿಂದ ಎಚ್ಚರಿಸುತ್ತಲೇ ಬಂದಿದ್ದಾರೆ. ಹಾಗೆಯೇ ನೀರು, ಗಾಳಿ, ನೆಲದಲ್ಲಿ ಹೆಚ್ಚುತ್ತಿರುವ ಮಾಲಿನ್ಯದ ಬಗ್ಗೆಯೂ ವೈಜ್ಞಾನಿಕ ಕಥೆಗಾರರು ಎಚ್ಚರಿಸಿದ್ದಾರೆ. ಆದರೆ ಈ ಎಚ್ಚರಿಕೆಯನ್ನು ನೀತಿ,ನಿಯಮಗಳನ್ನು ರೂಪಿಸುವವರು ಎಷ್ಟು ಗಂಭೀರವಾಗಿ ತೆಗೆದುಕೊಳ್ಳುತ್ತಾರೆ, ತೆಗೆದುಕೊಂಡಿದ್ದಾರೆ ಎನ್ನುವುದೇ ಪ್ರಶ್ನೆ."

● **ನಿಮಿಷ್ ಕಪೂರ್:** *ಓದುಗರು ಗಮನಿಸಲೇ ಬೇಕಾದ ಭಾರತೀಯ ಹಾಗೂ ವಿದೇಶೀ ಕಥೆಗಾರರು ಹಾಗೂ ಅವರ ಕಥೆಗಳು ಯಾವುವು?*

**ಮೇವಾಡಿ:** "ನನ್ನ ಮಟ್ಟಿಗೆ ಓದಲೇ ಬೇಕೆನ್ನುವ ಭಾರತೀಯ ಭಾಷೆಯ ಹಾಗೂ ಪ್ರಪಂಚದ ಇತರೆ ಭಾಷೆಗಳ ವೈಜ್ಞಾನಿಕ ಕಥೆಗಳು ವೈಜ್ಞಾನಿಕ ಕಥೆಗಳ ಇತಿಹಾಸದ ಅಂಗಗಳಾಗಿಬಿಟ್ಟಿವೆ. ಇವು ಹೊಸ ಲೇಖಕರಿಗೆ ಮಾರ್ಗದರ್ಶಿಗಳೂ ಕೂಡ. ಯಾವಾಗ, ಹೇಗೆ, ಎಂತಹ ವೈಜ್ಞಾನಿಕ ಕಥೆಗಳನ್ನು ಬರೆಯಬೇಕು ಅಂತ. ವೈಜ್ಞಾನಿಕ ಕಥಾಸಾಹಿತ್ಯದ ವಿಕಾಸದ ಹಾದಿಯಲ್ಲಿ ನಡೆದ ಪ್ರಯೋಗಗಳು ಹಾಗೂ ಆ ಪ್ರಕಾರದಲ್ಲಿ ಇರುವ ವೈವಿಧ್ಯಮಯ ವಿಷಯಗಳ ಬಗ್ಗೆ ಹೊಸ ಲೇಖಕರಿಗೆ ಅರಿವಾಗುತ್ತದೆ. ಉದಾಹರಣೆಗೆ, ಹಿಂದಿಯ ಮೊತ್ತ ಮೊದಲ ವೈಜ್ಞಾನಿಕ ಕಥೆ ಚಂದ್ರಲೋಕ್ ಕಿ ಯಾತ್ರಾ, ರಾಹುಲ್ ಸಂಕೃತ್ಯಾಯನರ ಕಿರುಕಾದಂಬರಿ, ಬೀಸ್ವೀ ಸದಿ, ಅಲ್ಲದೆ ಹಳೆಯ ಕಾಲದ ಇನ್ನೂ ಹಲವು ಪ್ರಮುಖರ ಕಥೆಗಳು ಓದಲೇ ಬೇಕಾದಂಥವು. ಹಾಗೆಯೇ ಸಾಧ್ಯವಾದರೆ, ಬೆಂಗಾಳಿ, ಮರಾಠಿ, ಅಸಾಮೀ ಹಾಗೂ ಇತರೆ ಭಾರತೀಯ ಭಾಷೆಗಳಿಂದ ಅನುವಾದಿಸಿದ ಕಥೆಗಳನ್ನೂ ಓದಬಹುದು.

ಕಳೆದ ಶತಮಾನದ ಮೂರನೆಯ ದಶಕದಲ್ಲಿ ಈ ಪ್ರಕಾರವನ್ನು ವೈಜ್ಞಾನಿಕ ಕಥಾಪ್ರಕಾರವೆಂದು ಹೆಸರಿಸಲಾಯಿತು. ಅದಕ್ಕೂ ಮುನ್ನ ಬಹಳ ಹಿಂದಿನಿಂದಲೂ ಇಂತಹ ಕಥೆಗಳನ್ನು ಬರೆಯುತ್ತಿದ್ದರು. ಇಂಗ್ಲೀಷಿನಲ್ಲಿ ಮೊತ್ತ ಮೊದಲ ಕಥೆ, ಫ್ರಾಂಕನ್‌ಸ್ಟೈನ್: ಮಾಡರ್ನ್ ಪ್ರೊಮೆಥಿಯಸ್ ಎನ್ನುವುದು. 1818ರಲ್ಲಿ ಮೇರಿ ಶೆಲ್ಲಿ ಬರೆದದ್ದು. ಸಾಹಸ ಪ್ರವಾಸಗಳ ಬಗ್ಗೆ ಬರೆದ ಜೂಲ್ಸ್ ವರ್ನೆ, ಹಾಗೂ ಸಾಮಾಜಿಕ ವೈಜ್ಞಾನಿಕ ಕಾದಂಬರಿಗಳನ್ನು ಬರೆದ ಎಚ್.ಜಿ.ವೆಲ್ಸ್ ರನ್ನೂ ವೈಜ್ಞಾನಿಕ ಕಥೆಗಳ ಜನಕರೆಂದು ಗುರುತಿಸಲಾಗಿದೆ.

ಇವರಲ್ಲದೆ, ಆರ್ಥರ್ ಕಾನನ್ ಡಾಯಲ್, ಜೊನಾಥನ್ ಸ್ವಿಫ್ಟ್, ಅನಾತೋಲಿ ಫ್ರಾನ್ಸ್, ರುಡ್ಯಾರ್ಡ್ ಕಿಪ್ಲಿಂಗ್, ಜಾಕ್ ಲಂಡನ್, ಇ.ಎಂ. ಫೋರ್ಸ್ಟರ್, ಕರೇಲ್ ಶಾಪೆಕ್ ಮೊದಲಾದವರ ಕಥೆಗಳನ್ನೂ ಓದುವುದರಿಂದ ಈ ಪ್ರಕಾರದ ಇತಿಹಾಸವನ್ನು ಅರ್ಥ ಮಾಡಿಕೊಳ್ಳಬಹುದು. ನವೀನ ಲೇಖಕರಲ್ಲಿ ಐಸಾಕ್ ಅಸಿಮೋವ್, ಆರ್ಥರ್ ಕ್ಲಾರ್ಕ್, ಎಇ. ವ್ಯಾನ್ ವೋಗ್ಟ್, ರಾಬರ್ಟ್ ಎ ಹೈನ್‌ಲೀನ್, ರೇ ಬ್ರಾಡ್ಬರಿ, ಆಲ್ಡಸ್ ಹಕ್ಸ್ಲೀ, ಜಾರ್ಜ್ ಆರ್ವೆಲ್, ಕುರ್ತ್ ವೊನೆಗುತ್‌ರ ಕಥೆಗಳನ್ನೂ ಓದುವುದು ಒಳ್ಳೆಯದು.

ಹಾಗೆಯೇ ಪ್ರಪಂಚದ ಇತರೆ ಭಾಷೆಗಳಿಂದ ಇಂಗ್ಲೀಷಿಗೆ ಅನುವಾದಿಸಿದವುಗಳನ್ನೂ ಓದಬಹುದು. ಸಂಜೀವರ 'ರೆಹ್ ಗಯೇ ದಿಶಾಯೇಂ ಇಸೀ ಪಾರ್', ಮತ್ತು 'ಫಾನ್ಸ್', ಮಹುವಾ ಮಾಜಿಯ ಕಾದಂಬರಿ 'ಮರಾಂಗ್ ಘೋಡಾ ನೀಲಕಂಠ್ ಹುವಾ,' ರಮೇಶ್ ಉಪಾಧ್ಯಾಯರ "ಮೌಸಮ್ ಕಿ ಭವಿಷ್ಯವಾಣಿ' ಮತ್ತು ಮಮತಾ ಸಿಂಗರ ಕಾದಂಬರಿ 'ಅಲಾವ್ ಪರ್ ಕೋಖ್' ಮುಂತಾದುವು ಗಮನಾರ್ಹವಾದಂಥವು.

● **ನಿಮಿಷ್ ಕಪೂರ್:** *ಈ ಚರ್ಚೆ ಚೆನ್ನಾಗಿತ್ತು. ಧನ್ಯವಾದಗಳು*

**ಮೇವಾಡಿ:** ಧನ್ಯವಾದಗಳು

---

**ಶ್ರೀ ದೇವೇಂದ್ರ ಮೇವಾಡಿ ಸುಪ್ರಸಿದ್ಧ ಹಿಂದೀ ವೈಜ್ಞಾನಿಕ ಕಥೆಗಾರರು. ಸಂದರ್ಶಕರು: ಶ್ರೀ ನಿಮಿಷ್ ಕಪೂರ್, ವಿಜ್ಞಾನಿ 'ಎಫ್', ವಿಜ್ಞಾನ ಪ್ರಸಾರ್, ನವದೆಹಲಿ. ಕನ್ನಡಕ್ಕೆ: ಎ. ಎಸ್. ವಸಂತ.**

ಪ್ರೀತಿಯ ಅಜ್ಜ,

ಮಿತಾಲಿ ಹಾಗೂ ನನ್ನ ವಂದನೆಗಳು. ಹೇಗಿದ್ದೀರಿ? ಅಜ್ಜಿ ಹೇಗಿದ್ದಾರೆ? ಬಹಳ ದಿನಗಳಿಂದ ನಿಮ್ಮ ಕಡೆಯಿಂದ ಯಾವುದೇ ಪತ್ರ ಬಂದಿಲ್ಲ. ನಮ್ಮನ್ನು ಮರೆತುಬಿಟ್ಟಿರಾ? ನಿಮಗೆ ಗೊತ್ತಾ, ಈ ಮಧ್ಯೆ ನಾವು ನಿಮ್ಮಿಬ್ಬರನ್ನೂ ತುಂಬಾ ಮಿಸ್ ಮಾಡಿಕೊಳ್ಳುತ್ತಿದ್ದೇವೆ. ಏಕೆ ಗೊತ್ತಾ? ಇತ್ತೀಚೆಗೆ ನಾವು ನಮ್ಮ ಶಾಲೆಯಿಂದ ಡಾರ್ಜಿಲಿಂಗಿನ 'ಸನ್‌ಶೈನ್ – ಗೋಲ್ಡನ್ ಹಿಲ್' ಗೆ ಶೈಕ್ಷಣಿಕ ಪ್ರವಾಸಕ್ಕೆ ಹೋಗಿದ್ದೆವು. ಅಲ್ಲಿ ಸೂರ್ಯೋದಯವನ್ನು ನೋಡಬೇಕೆಂದು ಬಯಸಿದ್ದೆವು. ಪ್ರಕೃತಿಯ ಮೇಲೆ ಸೂರ್ಯಕಿರಣಗಳ ಮೋಡಿ ಮಾಡುವುದು ಹೇಗೆಂದು ನೋಡಬೇಕಿತ್ತು. ಇದು ಈ ಬಾರಿ ಶಾಲೆಯಿಂದ ನಮಗೆ ಕೊಟ್ಟಿರುವ ಪ್ರಾಜೆಕ್ಟು. ಇದಕ್ಕಾಗಿ ನಾವು ಎಲ್ಲಿಗಾದರೂ ಹೋಗಿ ಸೂರ್ಯನನ್ನು ನೋಡಬೇಕಿತ್ತು. ನಮ್ಮೂರು ದೆಹಲಿಯಲ್ಲಿ ಸೂರ್ಯ ಕಾಣಿಸುವುದಿಲ್ಲ. ಇಲ್ಲಿಯ ಗಾಳಿಯಲ್ಲಿ ಎಷ್ಟೊಂದು ಹೊಗೆ ತುಂಬಿರುತ್ತದೆ ಎಂದರೆ, ಹಗಲೂ ರಾತ್ರಿಯೂ, ಕಿಟಕಿಯಾಚೆಯಿಂದ ಬರುವ ಬೆಳಕು ಯಾವುದೋ ಮಸುಕಾದ ಗಾಜಿನೊಳಗಿಂದ ಬಂದಂತೆ ಮಬ್ಬಾಗಿರುತ್ತದೆ. ಮೋಟಾರು–ಕಾರುಗಳು ಉಗುಳಿದ ಹೊಗೆ ಗಾಳಿಯಲ್ಲಿ ಎಷ್ಟೊಂದು ಬೆರೆತಿದೆ ಎಂದರೆ ಸುತ್ತಲೂ ಎಲ್ಲಕಡೆಯೂ ಅದೇ ತುಂಬಿಕೊಂಡಂತೆ ಕಾಣುತ್ತದೆ.

ಅಜ್ಜ, ನೀವು ದೆಹಲಿಯಲ್ಲಿ ಕೆಲಸ ಮಾಡುತ್ತಿದ್ದಾಗ ಮೋಟಾರು ಕಾರುಗಳ ವಿಷಕಾರಿ ಹೊಗೆಯಿಂದ ಬೆಳಿಗ್ಗೆ ಮತ್ತು ಸಂಜೆ ಉಸಿರುಗಟ್ಟುತ್ತಿತ್ತು




ಎಂದು ನಮಗೆ ಬರೆದಿದ್ದಿರಿ. ಹೊಗೆ ಎಷ್ಟು ದಟ್ಟವಾಗಿತ್ತು ಎಂದರೆ ಕಛೇರಿಗೆ ಹೋಗುವಾಗ, ಮನೆಗೆ ಹಿಂದಿರುಗುವಾಗಲೂ, ಕೂಡುರಸ್ತೆಗಳಿರುವಲ್ಲಿ, ಕಣ್ಣು ಉರಿಯುತ್ತಿದ್ದುವು. ಗಂಟಲು ಕಟ್ಟಿದಂತಾಗಿ ಜನ ಕೆಮ್ಮಲು ತೊಡಗುತ್ತಿದ್ದರು. ಸ್ಕೂಟರ್ ಮತ್ತು ಮೋಟಾರು ಕಾರುಗಳನ್ನು ಓಡಿಸುವಾಗ ಕೆಲವರು 'ಮಾಸ್ಕ್' ಧರಿಸಲು ಪ್ರಾರಂಭಿಸಿದರು ಎಂದೂ ನೀವು ಬರೆದಿದ್ದಿರಿ. ಆ ಜನರು ಅನ್ಯಗ್ರಹಗಳ ಜೀವಿಗಳಂತೆ ಕಾಣುತ್ತಾರೆ ಎಂದು ನೀವು ಹೇಳಿದಾಗ ನಮಗೆ ನಗು ಬಂದಿತ್ತು. ಆದರೆ, ಅದು ಮೂವತ್ತು ವರ್ಷಗಳ ಹಿಂದಿನ ಪರಿಸ್ಥಿತಿ. ಈಗ ನೀವು ಇಲ್ಲಿಗೆ ಬಂದರೆ, ನೀವು ಇನ್ನೂ ಹೆಚ್ಚು ಅನ್ಯಗ್ರಹ ಜೀವಿಗಳನ್ನು ನೋಡುವಿರಿ! ನಮ್ಮ ದೆಹಲಿಯ ಗಾಳಿಯಲ್ಲಿ ಎಷ್ಟು ಹೊಗೆ ತುಂಬಿದೆ ಎಂದರೆ, ಜನರು ವಾಹನ ಚಲಾಯಿಸುವಾಗ ಮಾತ್ರವಲ್ಲ, ಮಾರುಕಟ್ಟೆಗಳಲ್ಲಿ ತಿರುಗಾಡುವಾಗಲೂ 'ಮಾಸ್ಕ್' ಧರಿಸುತ್ತಾರೆ. ಪ್ರತಿದಿನವೂ ದೆಹಲಿಯ ಗಾಳಿಗೆ ಸುಮಾರು 1400ಮೆಟ್ರಿಕ್ ಟನ್ನುಗಳಷ್ಟು ಎಸ್.ಪಿ.ಎಂ. ಸೇರುತ್ತಿದೆ ಎಂದು ನಮ್ಮ ಪರಿಸರ ವಿಜ್ಞಾನದ ತರಗತಿಯಲ್ಲಿ ನಮಗೆ ತಿಳಿಸಿದರು. ಅಂದರೆ, ಅಜ್ಜ, ನಾವ ಉಸಿರಾಡುವ ಗಾಳಿಯಲ್ಲಿ ಅಷ್ಟೊಂದು ವಿಷ ತುಂಬಿದೆ. ಇಲ್ಲಿ ಇರುವುದು ಬೇಡ ಅಂತ ನೀನು ಹುಟ್ಟಿದ ಮಲೆನಾಡಿನ ಮಡಿಲಿಗೇ ಮರಳಿದ್ದು ಸರಿಯಾದ ನಿರ್ಧಾರ . ಅಪ್ಪ ನೀನು ಪರ್ವತಗಳನ್ನು ಪೂಜಿಸುತ್ತಿದ್ದೀ ಎನ್ನುತ್ತಾರೆ. ನೀವು ಯಾವಾಗಲೂ ಪರ್ವತಗಳ ಕನಸುಗಳನ್ನೇ ಕಾಣುತ್ತಿದ್ದಿರಂತೆ! ಎಲ್ಲಿ ಏನೇ ನಡೆದರೂ ಅದರಲ್ಲಿ ನಿಮಗೆ ಪರ್ವತದ ಒಂದಿಷ್ಟು ಕಂಡೇ ಕಾಣುತ್ತಿತ್ತಂತೆ.

ಡಾರ್ಜಿಲಿಂಗ್‌ಗೆ ಭೇಟಿ ನೀಡಿದ ನಂತರ ಈಗ ನಿಮ್ಮಂತೆ ನನಗೂ ಮರಗಳು, ಪರ್ವತಗಳು, ಪಕ್ಷಿಗಳು ಮತ್ತು ನದಿಗಳ ಕನಸುಗಳು ಬೇಕು ಎಂದು ಆಸೆಯಾಗುತ್ತಿದೆ! ಟೈಗರ್ ಹಿಲ್‌ನಲ್ಲಿ ಎತ್ತರದ ಧೂಪಿ ಮರಗಳ ಮೂಲಕ ಸೂರ್ಯೋದಯವನ್ನು ಕಂಡದ್ದನ್ನು ನಾನು ಎಂದಿಗೂ ಮರೆಯಲಾರೆ. ಕಾಂಚನಜುಂಗಾ ಮತ್ತು ಎವರೆಸ್ಟ್ ಶಿಖರವು ಸೂರ್ಯೋದಯಕ್ಕೆ ಮೊದಲು ಮತ್ತು ಸೂರ್ಯಾಸ್ತದ ನಂತರ ಬಣ್ಣ ಬದಲಾಯಿಸುವ ಕನಸನ್ನೂ ನಾನು ಕಂಡಿದ್ದೆ. ಅಜ್ಜ, ನಿಮಗೊಂದು ತಮಾಷೆಯ ವಿಷಯ ಹೇಳಬೇಕು. ಹಿಂತಿರುಗುವಾಗ, ನಾವು ಮಿರಿಕ್‌ನಲ್ಲಿ ತಂಗಿದ್ದೆವು. ಬೆಳಿಗ್ಗೆ ನಮ್ಮನ್ನುಎಬ್ಬಿಸುತ್ತಿದ್ದವರು ಯಾರು ಗೊತ್ತಾ? ಪಕ್ಷಿಗಳು..! ಹೌದು, ಪಕ್ಷಿಗಳ ಚಿಲಿಪಿಲಿ ನಮ್ಮನ್ನು ಎಚ್ಚರಿಸುತ್ತಿತ್ತು. ಮುಸ್ಸಂಜೆಯಲ್ಲಿ ಮತ್ತೆ ಅದೇ ಹಕ್ಕಿಗಳ ಚಿಲಿಪಿಲಿ, ಜೀರುಂಡೆಗಳ ನಾದ ಮತ್ತು ಕಪ್ಪೆಗಳ ಶಾಸ್ತ್ರೀಯ ಸಂಗೀತ! ಅಜ್ಜ, ಸತ್ಯವಾಗಿಯೂ ನಾನು ಮತ್ತು ಮಿತಾಲಿ ಬೇರೆ ಯಾವುದೋ ಪ್ರಪಂಚಕ್ಕೆ ಬಂದಿದ್ದೇವೆ ಎಂದುಕೊಂಡಿದ್ದೆವು. . ಹಾಂ. ನಕ್ಷತ್ರಗಳ ಬಗ್ಗೆ ಹೇಳಲು ಮರೆತಿದ್ದೆ! ನಾವು ಯಾವತ್ತೂ ಆಕಾಶದಲ್ಲಿ ಇಷ್ಟೊಂದು ನಕ್ಷತ್ರಗಳನ್ನು ನೋಡಿರಲಿಲ್ಲ. ಎಷ್ಟೊಂದು ನಕ್ಷತ್ರಗಳು ಮತ್ತು ಬಿಳಿಯ ಹಾಲುಹಾದಿ. ಅದೇ ದೆಹಲಿಯಲ್ಲಿ ಭಾರೀ ಮಳೆಯ ನಂತರವೂ ಆಕಾಶದಲ್ಲಿ ಕೆಲವೇ ಕೆಲವು ನಕ್ಷತ್ರಗಳು ಮಾತ್ರ ಕಾಣುತ್ತವೆ. ಉಳಿದವುಗಳನ್ನು ನಾವು ನೆಹರು ತಾರಾಲಯದಲ್ಲಿ ಮಾತ್ರ ನೋಡಬೇಕಿತ್ತು!.

ಅಲ್ಲಿಂದ ಹಿಂತಿರುಗಿದಾಗ ಯಾವುದೋ ಉರಿಯುವ ಕುಲುಮೆಗೆ ಮರಳಿದ ಅನುಭವವಾಯಿತು. ಅಗಾಧ ಬಿಸಿಯಾದ, ಉಸಿರುಗಟ್ಟಿಸುವಂತಹ ಹೊಗೆ ತುಂಬಿದ ಕುಲುಮೆಗೆ ಬಂದಂತೆ. ನಮ್ಮ ವಿಮಾನ ಲ್ಯಾಂಡಿಂಗ್‌ಗಾಗಿ ದೆಹಲಿಯ ಮೇಲೆ ಹಾರುತ್ತಿದ್ದಾಗ, ಕೆಳಗೆ ಕಪ್ಪು ರಸ್ತೆಗಳು ಮತ್ತು ಸಾವಿರಾರು ಕಾಂಕ್ರೀಟ್ ಕಟ್ಟಡಗಳು ಮಾತ್ರ ಗೋಚರಿಸಿದವು. ಹೊಗೆಯ ಹೊದಿಕೆ ಹೊದ್ದ ಒಣ ಕಟ್ಟಡಗಳು. ಎಲ್ಲೂ ಒಂದು ಇಂಚು ಭೂಮಿಯೂ ಇಲ್ಲ ಅನ್ನಿಸಿತು. ಆ ಶುದ್ಧ ಗಾಳಿ ಮತ್ತು ಹಸಿರನ್ನು ನೋಡಿದ ನಂತರ ದೆಹಲಿಗೆ ಹಿಂತಿರುಗಿದಾಗ ನನ್ನ ಹೃದಯ ಭಾರವಾಗಿದೆ. ನನಗೆ ಹೆದರಿಕೆಯಾಗಿದೆ. ಮಿತಾಲಿ ಮತ್ತು ನಾನು ಹಲವಾರು ದಿನಗಳಿಂದ ಮಾಸ್ಕನ್ನು ಧರಿಸಿಯೇ ಮನೆಯಲ್ಲಿದ್ದೇವೆ.

ನೀವು ಪ್ರತಿದಿನ ಸೂರ್ಯೋದಯ ಮತ್ತು ಸೂರ್ಯಾಸ್ತವನ್ನು ಅನುಭವಿಸುತ್ತಿರಬೇಕು, ಶುದ್ಧ ಗಾಳಿಯನ್ನು ಉಸಿರಾಡುತ್ತಿರಬೇಕು. ನಾವೇನು ಮಾಡೋಣ? ಅಪ್ಪನಿಗೂ ಬಿಡುವಿಲ್ಲ. ಅಮ್ಮನಿಗೂ ಅಷ್ಟೆ. ಹೀಗಾಗಿ ನಾವು ಎಲ್ಲಿಗೂ ಹೋಗಲು ಆಗುತ್ತಿಲ್ಲ. ನಾವು ನಿಮ್ಮ ಬಳಿಗೆ ಬಂದರೆ, ನಾವು ಶುದ್ಧ ಗಾಳಿಯನ್ನು ಎದೆ ತುಂಬ ಉಸಿರಾಡಬಹುದು. ಈಗ ಮೋಟಾರು–ಕಾರುಗಳ ಶಬ್ದ ಸ್ವಲ್ಪ ಕಡಿಮೆಯಾಗಿದೆ. ತಡರಾತ್ರಿ ಆಗಿರಬೇಕು. ಆದ್ದರಿಂದ ನನಗೆ ಇಲ್ಲಿಗೇ ನಿಲ್ಲಿಸುತ್ತಿದ್ದೇನೆ. ಉಳಿದದ್ದು ಮುಂದಿನ ಪತ್ರದಲ್ಲಿ. ಬೆಳಿಗ್ಗೆ ನಮಗೆ ಎಚ್ಚರವಾಗುವುದು ಹಕ್ಕಿಗಳ ಚಿಲಿಪಿಲಿಯಿಂದಲ್ಲ, ಆದರೆ ಬಸ್ಸುಗಳು ಮತ್ತು ಮೋಟಾರು–ಕಾರುಗಳ ಹಾರ್ನುಗಳ ಸದ್ದಿನಿಂದ.

ಸರಿ ಅಜ್ಜ ಅಜ್ಜಿಗೆ ನಮ್ಮ ಶುಭಾಶಯಗಳನ್ನು ತಿಳಿಸಿ. ನಿನ್ನ ಪತ್ರಕ್ಕಾಗಿ ಕಾಯುತ್ತೇನೆ.

****

– ಮುಕುಲ್

ದೆಹಲಿ
ಮೇ 14, 2025

ಪ್ರೀತಿಯ ಅಜ್ಜ,

ನಿಮ್ಮ ಪತ್ರ ದೊರಕಿದೆ. ಒಮ್ಮೊಮ್ಮೆ ನಮ್ಮೊಂದಿಗೆ ಟೆಲಿಫೋನ್‌ನಲ್ಲಿ ಮಾತನಾಡಲು ನಿಮಗೆ ತುಂಬಾ ಆಸೆ ಇದ್ದರೂ, ಕಿವಿ ಕೇಳಿಸದೆ ಇರುವುದರಿಂದ ಆಗುತ್ತಿಲ್ಲ ಎಂದು ಬರೆದಿದ್ದೀರಿ. .... ಈ ಎಂಬತ್ತೆರಡರ ವಯಸ್ಸಿನಲ್ಲಿ ಸ್ಪಷ್ಟವಾಗಿ ಕೇಳುವುದಿಲ್ಲ ಎನ್ನುತ್ತಿರುವವರು ನೀವೇ. ಆದರೆ, ಅಜ್ಜ, ನಂಬಿ. ನಾವು ಈ ವಯಸ್ಸಿಗೆ ಈಗಾಗಲೇ ಸ್ವಲ್ಪ ಕಿವುಡರಾಗಿದ್ದೇವೆ! ನಾವಷ್ಟೇ ಅಲ್ಲ, ದೆಹಲಿಯ ಮೂರು ಕೋಟಿ ಹನ್ನೊಂದು ಲಕ್ಷ ಜನಸಂಖ್ಯೆಯಲ್ಲಿ ಬಹುತೇಕ ಕಿವುಡರೇ. ಇಲ್ಲಿಯ ರಸ್ತೆಗಳಲ್ಲಿ ಓಡಾಡುವ ಬಸ್ಸುಗಳು, ಮೋಟಾರು ಕಾರುಗಳು, ತ್ರಿಚಕ್ರ ವಾಹನಗಳು ಮತ್ತು ದ್ವಿಚಕ್ರ ವಾಹನಗಳು ಎಷ್ಟು ಕರ್ಕಶವಾದ ಸದ್ದು ಮಾಡುತ್ತಿವೆ ಎಂದರೆ ಯಾರಿಗೂ ಕಿವಿ ಕೇಳಿಸುವುದು ಕಷ್ಟವೇ. ನಾವೆಲ್ಲರೂ ವೈದ್ಯರ ಭಾಷೆಯಲ್ಲಿ ಹೇಳುವಂತೆ, "ಶಬ್ದ ಪ್ರೇರಿತ ಕಿವುಡುತನ"ಕ್ಕೆ ಬಲಿಯಾಗಿದ್ದೇವೆ. ಪಿಸುಮಾತುಗಳನ್ನು ಇಲ್ಲಿ ಕೇಳಲು ಸಾಧ್ಯವೇ ಇಲ್ಲ. ಎಲ್ಲರ ಬಳಿಯೂ ಅತಿ ಕರ್ಕಶವಾದ ಅಲಾರಂ ಗಡಿಯಾರಗಳೇ ಇವೆ. ಪರಸ್ಪರ ಮಾತಾಡುವಾಗ ಎಲ್ಲರೂ ಜೋರಾಗಿಯೇ ಮಾತಾಡಬೇಕು. ಎಲ್ಲರೂ ಹೆಚ್ಚೂ ಕಡಿಮೆ ಅರಚುತ್ತಾರೆ. ನೀವು ಇಲ್ಲಿದ್ದಾಗ ದೆಹಲಿಯ ಜನಸಂಖ್ಯೆ ಸುಮಾರು 85 ಲಕ್ಷವಿತ್ತು. ಸುಮಾರು 22 ಲಕ್ಷ ವಾಹನಗಳು ರಸ್ತೆಗಳಲ್ಲಿ ಸಂಚರಿಸುತ್ತಿದ್ದವು ಎಂದು ಬರೆದಿದ್ದಿರಿ. ಆದರೆ ಇಂದು 91 ಲಕ್ಷಕ್ಕೂ ಹೆಚ್ಚು ಬಸ್ಸುಗಳು, ಮೋಟಾರು ಕಾರುಗಳು ಮತ್ತು ಇತರ ವಾಹನಗಳು ಬೃಹತ್ ದೆಹಲಿಯ ರಸ್ತೆಗಳಲ್ಲಿ ಓಡಾಡುತ್ತಿವೆ. ಅಜ್ಜ,

**ಬೇವು, ಜಾಮೂನ್, ಶಿರೀಷ್, ಪಾಕರ್, ಅಮಲ್ತಾಸ್, ಗುಲ್ಮೊಹರ್, ಜಕರಂದ, ವಿಲಾಯಿತಿ ಬಬೂಲ್, ಸೇಮಲ್, ಕಚ್ನಾರ್ ಮರಗಳು.... ನೀವೂ ಇವೆಲ್ಲವುಗಳ ನೆರಳು ಮತ್ತು ತಂಪನ್ನು ಅನುಭವಿಸಿದ್ದಿರಿ. ಆದರೆ, ಈಗ ಇಲ್ಲಿನ ರಸ್ತೆಗಳಲ್ಲಿ ಆ ಮರಗಳ ನೆರಳು ಇಲ್ಲವೇ ಇಲ್ಲ. ಆ ಮರಗಳಲ್ಲಿ ಹೆಚ್ಚಿನವು ಯಾವಾಗ ಒಣಗಿದವು ಎಂಬುದು ಗೊತ್ತಿಲ್ಲ. ಆ ಮರಗಳು ಏಕೆ ಒಣಗಿದುವು ಎನ್ನುವುದಾದರೂ ಗೊತ್ತಾ, ಅಜ್ಜಾ?**

ಅವುಗಳಿಂದ ಎಷ್ಟು ಶಬ್ದ ಬರುತ್ತದೆ. ಎಷ್ಟು ವಿಷಕಾರಿ ಹೊಗೆ ಸುರಿಯುತ್ತಿರುತ್ತದೆ ಎನ್ನುವುದನ್ನು ನೀವೇ ಊಹಿಸಿ. ಇಲ್ಲಿನ ಜನರಲ್ಲಿ ಹೆಚ್ಚಿನವರಿಗೆ ಬರುವ ಖಾಯಿಲೆ ಯಾವುದು ಗೊತ್ತಾ ಅಜ್ಜಾ? ಆಸ್ತಮಾ ಮತ್ತು ಬ್ರಾಂಕೈಟಿಸ್! ಗಾಳಿಯಲ್ಲಿ ವಿಷಕಾರಿ ಹೊಗೆ ಮಿಶ್ರಿತವಾಗಿರುವುದೇ ಇದಕ್ಕೆ ಕಾರಣ. ನೀವು ಸೂಚಿಸಿದ ಪುಸ್ತಕಗಳನ್ನು ನಾನು ಓದಿದ್ದೇನೆ. ಅವುಗಳನ್ನು ಓದಿದ ನಂತರ ನನಗೆ ಯೋಚನೆಯಾಗಿದೆ. ಆಗಿದ್ದ ಹಸಿರೆಲ್ಲ ಎಲ್ಲಿ ಮಾಯವಾದುವು? ರಸ್ತೆಯುದ್ದಕ್ಕೂ ಇದ್ದ ಹಸಿರು ಮರಗಳು ಎಲ್ಲಿ ಹೋದವು? ಅಜ್ಜ, ಅವೆಲ್ಲ ಈಗ ಪುಸ್ತಕಗಳಲ್ಲಿ ಮಾತ್ರ ಉಳಿದಿವೆ ಎನಿಸುತ್ತಿದೆ. ನಾನು ಓದಿದ ಪುಸ್ತಕಗಳು – ಸರ್ ಎಡ್ವಿನ್ ಲುಟ್ಯೆನ್ಸ್ ನವದೆಹಲಿಯ ಅಡಿಪಾಯವನ್ನು ಹಾಕಿದವರು ಮತ್ತು ಸುಮಾರು 105 ವರ್ಷಗಳ ಹಿಂದೆ ಇಲ್ಲಿ ಹಸಿರು ಮರಗಳನ್ನು ನೆಟ್ಟ ಮುಸ್ತೋವ್ ಅವರದ್ದು. ಬೇವು, ಜಾಮೂನ್, ಶಿರೀಷ್, ಪಾಕರ್, ಅಮಲ್ತಾಸ್, ಗುಲ್ಮೊಹರ್, ಜಕರಂದ, ವಿಲಾಯಿತಿ ಬಬೂಲ್, ಸೇಮಲ್, ಕಚ್ನಾರ್ ಮರಗಳು.... ನೀವೂ ಇವೆಲ್ಲವುಗಳ ನೆರಳು ಮತ್ತು ತಂಪನ್ನು ಅನುಭವಿಸಿದ್ದಿರಿ. ಆದರೆ, ಈಗ ಇಲ್ಲಿನ ರಸ್ತೆಗಳಲ್ಲಿ ಆ ಮರಗಳ ನೆರಳು ಇಲ್ಲವೇ ಇಲ್ಲ. ಆ ಮರಗಳಲ್ಲಿ ಹೆಚ್ಚಿನವು ಯಾವಾಗ ಒಣಗಿದವು ಎಂಬುದು ಗೊತ್ತಿಲ್ಲ. ಆ ಮರಗಳು ಏಕೆ ಒಣಗಿದುವು ಎನ್ನುವುದಾದರೂ ಗೊತ್ತಾ, ಅಜ್ಜಾ? ಬಹುಶಃ ನಿಮ್ಮ ಸಮಯದಲ್ಲಿಯೇ ಅವು ಒಣಗಲು



ಪ್ರಾರಂಭಿಸಿದ್ದಿರಬೇಕು. ಎಲ್ಲವನ್ನೂ ಸಿಮೆಂಟು, ಕಾಂಕ್ರೀಟು, ಕಲ್ಲುಗಳಿಂದ ಮುಚ್ಚುವ ಭರದಲ್ಲಿ, ರಸ್ತೆಗಳ ಉದ್ದಕ್ಕೂ ಮರಗಳ ಸುತ್ತಲೂ ಸಿಮೆಂಟಿನ ಹೆಂಚುಗಳನ್ನು ಹಾಕಲಾಯಿತು. ಇಡೀ ನೆಲವನ್ನು ಹೀಗೆ ಮುಚ್ಚಲಾಯಿತು. ಆಗ ಮರಗಳೂ ಮಳೆ ನೀರನ್ನು ಹೀರಿಕೊಳ್ಳುವುದನ್ನು ನಿಲ್ಲಿಸಿದವು. ಕ್ರಮೇಣ ಅವು ಒಣಗುತ್ತಾ ಹೋದವು. ಮಳೆಯಾಗುತ್ತಿತ್ತು. ಆದರೆ ಅದರ ನೀರು ಭೂಮಿಗೆ ಹೋಗುವ ಬದಲು ರಸ್ತೆಗಳು ಮತ್ತು ಚರಂಡಿಗಳ ಮೂಲಕ ಹರಿದು ನೇರವಾಗಿ ಯಮುನಾ ನದಿಗೆ ಹರಿಯುತ್ತದೆ. ಅಜ್ಜ, ಮೂವತ್ತು ವರ್ಷಗಳ ಹಿಂದೆ ನೀವು ದೆಹಲಿಯಲ್ಲಿದ್ದಾಗ ಅನೇಕ ಕಾಲೋನಿಗಳಲ್ಲಿ ಜನರು ಕೈಪಂಪುಗಳಿಂದ ನೀರು ಪಡೆಯುತ್ತಿದ್ದರು ಎಂದು ನೀವು ಒಮ್ಮೆ ಬರೆದಿದ್ದಿರಿ. ಈಗ ಮೋಟಾರ್ ಪಂಪ್ ಸಹಾಯದಿಂದ ನೀರು ಹರಿಸಿ ಟ್ಯಾಂಕ್‌ಗಳಲ್ಲಿ ತುಂಬಿಸುತ್ತಿದ್ದರು. ಇದನ್ನು ಸ್ನಾನ ಮಾಡಲು ಮತ್ತು ಶುಚಿಗೊಳಿಸಲು ಬಳಸುತ್ತಿದ್ದರು. ನಗರಸಭೆಯಿಂದ ಬೆಳಗ್ಗೆ ಮತ್ತು ಸಂಜೆ ಕುಡಿಯುವ ನೀರು ಸರಬರಾಜಾಗುತ್ತಿತ್ತು. ಆದರೆ, ಈಗ ಅಂತರ್ಜಲದ ಮಟ್ಟ ಎಷ್ಟು ತಳ ಮುಟ್ಟಿದೆ ಎಂದರೆ ಅದನ್ನು ಪಂಪು ಮಾಡಲು ಆಗುವುದೇ ಇಲ್ಲ. ಹೀಗಾಗಿ ಕೈಪಂಪ್‌ಗಳಾಗಲಿ, ಮೋಟಾರ್ ಪಂಪ್‌ಗಳಾಗಲಿ ಇಲ್ಲವೇ ಇಲ್ಲ. ದೆಹಲಿಯ ಮಳೆಯ ನೀರು ಹರಿದು ಹೋಗುವ ಬದಲಿಗೆ, ಈ ಲಕ್ಷಾಂತರ ಗ್ಯಾಲನ್ ನೀರನ್ನು ಭೂಮಿ ಹೀರಿಕೊಳ್ಳಲು ಬಿಡಬಹುದಿತ್ತಲ್ಲವಾ?

ಅಥವಾ ತಗ್ಗು ಪ್ರದೇಶಗಳಲ್ಲಿನ ಹಳ್ಳ, ಕೊಳ್ಳಗಳಲ್ಲಿ ಸಂಗ್ರಹ ಮಾಡಿದ್ದರೆ, ಈ ನೀರು ನೆಲದಲ್ಲಿ ಉಳಿಯುತ್ತಿತ್ತಲ್ಲವಾ? ಆ ದೊಡ್ಡ ದೊಡ್ಡ ಮರಗಳು ತಮ್ಮ ಉದ್ದನೆಯ ಬೇರುಗಳಿಂದ ಭೂಮಿಯೊಳಗೆ ನೀರಿಗಾಗಿ ನಿರಂತರವಾಗಿ ಹುಡುಕುತ್ತಿದ್ದಿರಬೇಕು, ಆದರೆ ನೀರು ಕಡಿಮೆಯಾದಂತೆ, ಅವು ಸಹ ಬಾಯಾರಿಕೆಯಿಂದ ಬಳಲಿ ಸತ್ತಿರಬೇಕು ಎನಿಸಿದಾಗ ಎದೆಗೆ ಚುಚ್ಚಿದಂತಾಗುತ್ತದೆ. . ಆದುದರಿಂದಲೇ ಈಗ ಬೂರುಗ ಹೊಳೆಯುತ್ತಿಲ್ಲ, ಗುಲ್ ಮೊಹರ್ ಅರಳುತ್ತಿಲ್ಲ, ಬೇವು ಮತ್ತು ಅರಳಿ ಎಲೆಗಳು ಗಿಲಿಗಿಲಿಸುತ್ತಿಲ್ಲ. ಅಜ್ಜ, ಇಷ್ಟೆಲ್ಲ ಆದರೂ ಕುಡಿಯುವ ನೀರಿಗೆ ಕೊರತೆ ಇಲ್ಲ. ಆ ಕಾಲದಲ್ಲಿ ನೀವಿಲ್ಲಿ ಇದ್ದಾಗ ಕುಡಿಯುವ ನೀರಿಗಾಗಿ ಖಾಲಿ ಕೊಡ, ಬಕೆಟ್‌ಗಳನ್ನು ಹಿಡಿದುಕೊಂಡು ಮುಷ್ಕರ ನಡೆಸುತ್ತಿದ್ದಿರಿ ಎಂದು ಕೇಳಿ ಮನಸಾರೆ ನಕ್ಕಿದ್ದೆವು! ಈಗ ಹಾಗಲ್ಲ. ಇಲ್ಲಿ ನಾವು ಯಮುನಾ, ಗಂಗಾ ಮತ್ತು ತೆಹರಿ ಅಣೆಕಟ್ಟಿನಿಂದ ಕುಡಿಯುವ ನೀರು ಬರುತ್ತದೆ. ಹೌದು, ಈಗಲೂ ಮುಷ್ಕರಗಳು ನಡೆಯುತ್ತಿವೆ. ಲಕ್ಷಗಟ್ಟಲೆ ಗ್ಯಾಲನ್ ಮಳೆ ನೀರನ್ನು ದೆಹಲಿಯಲ್ಲಿಯೇ ನಿಲ್ಲಿಸಲು ಕೊಳ ಕಟ್ಟೆಗಳನ್ನು ಕಟ್ಟಿಸಿ ಎಂದು. ಹೀಗಾದರೆ ಇಲ್ಲಿ ಭೂಮಿಯ ಒಳಗಿನ ನೀರಿನ ಮಟ್ಟ ಹೆಚ್ಚಾಗುವ ಸಾಧ್ಯತೆ ಇದೆ. ಬಹುಶಃ ಭೂಮಿ ಮತ್ತೆ ಹಸಿರು ತಳೆಯಲಿದೆ. ಆದರೆ ಇದಕ್ಕೆ ಎಷ್ಟು ಸಮಯ ಬೇಕೋ ಯಾರಿಗೆ ಗೊತ್ತು? ಇದು ಸಂಭವಿಸಿದರೂ, ಬೃಹತ್ ನೆರಳಿನ ಮರಗಳ ಸಾಲುಗಳು ಎದ್ದು ನಿಲ್ಲಬೇಕೆಂದರೆ ಇಪ್ಪತ್ತು ವರ್ಷಗಳಾದರೂ ಬೇಕು. ನಿಜ. ವೇಗವಾಗಿ ಬೆಳೆಯುವ ಮರಗಳು, ಅಲಂಕಾರಿಕ ಪೊದೆಗಳು ಮತ್ತು ಬಳ್ಳಿಗಳನ್ನು ಬೆಳೆಸಿದರೆ ನಾವು ದೆಹಲಿಯಲ್ಲಿ ಹಸಿರನ್ನು ಮರಳಿ ತರಬಹುದೇನೊ? ಅಲ್ಲವಾ ಅಜ್ಜ?
,

– ಮುಕುಲ್

****

ದೆಹಲಿ

ಜೂನ್ 5, 2025

ಪ್ರೀತಿಯ ಅಜ್ಜ,

ಇವತ್ತಿನ ದೆಹಲಿಯ ಸ್ಥಿತಿಗತಿಯನ್ನು ಓದಿದ ಮೇಲೆ ನಿಮ್ಮ ಕಾಲದ ದೆಹಲಿಯನ್ನು ನೀವು ನೆನಪಿಸಿಕೊಂಡಿದ್ದು ಒಳ್ಳೆಯದಾಯಿತು. 'ಬಹುಶಃ ದೆಹಲಿಯು 'ಅಭಿವೃದ್ಧಿ' ಹೊಂದುತ್ತಿರುವ ವೇಗದಿಂದ ಮತ್ತು ಬಿಲ್ಡರ್‌ಗಳು ಅದರ ಪ್ರತಿ ಇಂಚಿನ ಭೂಮಿಯಲ್ಲಿ ಆಕಾಶವನ್ನು ಮುಟ್ಟುವ ಕಾಂಕ್ರೀಟ್ ಕಟ್ಟಡಗಳನ್ನು ನಿರ್ಮಿಸಿದ್ದರಿಂದ ಹೀಗಾಗಲೇ ಬೇಕಿತ್ತು, ಮುಂದೊಂದು ದಿನ ದೆಹಲಿ ಕಾಂಕ್ರೀಟ್ ಕಾಡಾಗಲೇ ಬೇಕಿತ್ತು' ಎಂದು ನೀವು ಬರೆದಿದ್ದೀರಿ. ಆ ವೇಗ ನೋಡಿ ನೀವು ದೆಹಲಿಯನ್ನು ಬಿಟ್ಟೇ ಹೋಗಿಬಿಟ್ಟಿರಿ. ಹೊರಡುವಾಗ ಯಾವ ಕವಿಯ ಸಾಲು ನಿಮಗೆ ನೆನಪಾಗುತ್ತಿತ್ತೋ? ನೀವು ಬರೆದಿದ್ದೀರಿ... ಹೌದು, ಅದು ಜೌಕನ ಕವನ. ... ಕ್ಯೋಂ ಜಾಯೆ ಝೌಕ್ ದಿಲ್ಲಿ ಕಿ ಗಲಿಯಾಂ ಛೋಡ್ ಕರ್! ನಾನೂ, ಅಪ್ಪನೂ ಇದೇ ರೀತಿ ಒಮ್ಮೊಮ್ಮೆ ಯೋಚಿಸುತ್ತೇವೆ. ಏನೇ ಆಗಲಿ. ಇದು ನಮ್ಮದೇ ದೆಹಲಿ! ಹೌದು, ಕೆಂಪು ಕೋಟೆಗೆ ಭೇಟಿ ನೀಡಲು ಬರುವ ಪ್ರವಾಸಿಗರು "ಭೂಮಿಯ ಮೇಲೆ ಸ್ವರ್ಗವಿದ್ದರೆ ಅದು ಇಲ್ಲೇ... ಇಲ್ಲೇ... ಇಲ್ಲೇ.." ಎನ್ನುವ ಮಾತು ಕೇಳಿ ಅಚ್ಚರಿ ಪಡುತ್ತಾರೆ. ಜಮೀನಾಸ್ತೋ.... ಜಮೀನಾಸ್ಟ್.... ನೀವೇ ಯೋಚಿಸಿ; ಮುಖಕ್ಕೆ ಮಾಸ್ಕ್ ಹಾಕಿಕೊಂಡು ಇದನ್ನೆಲ್ಲ ಓದುವಾಗ ಹೇಗನ್ನಿಸುತ್ತಿರಬೇಕು? ದೆಹಲಿಯ 'ಹಸಿರು ಶ್ವಾಸಕೋಶ' ಅಥವಾ ರಿಡ್ಜ್ ನಿಮಗೆ ನೆನಪಿದೆಯೇ? ಅಜ್ಜ, ದೆಹಲಿ ಈಗ ಸಂಪೂರ್ಣವಾಗಿ ಕಪ್ಪು-ಬೂದು ಹೊಗೆಯ ಕ್ಯಾನ್ವಾಸ್‌ನಲ್ಲಿ, ಹಸಿರು ಕುಂಚದಿಂದ ಬಳಿದ ಮಸುಕು ಚಿತ್ರದಂತೆ ತೋರುತ್ತದೆ. ಕಲುಷಿತ ಗಾಳಿಯ ಮಸಿಯಿಂದಾಗಿ ಇಷ್ಟು ಕೊಳಕಾಗಿದೆ. ಕೆಲವೊಮ್ಮೆ ಮಳೆ ಬಂದು ಎಲೆಗಳನ್ನು ತೊಳೆದಾಗ ಪಿಲ್ಖಾನ್, ಅರಳಿ, ಬೇವು, ಗುಲಾರ್, ಶೀಷಮ್ ಮೊದಲಾದ ಮರಗಳು ಹಸಿರಿನಿಂದ ಕಂಗೊಳಿಸುತ್ತವೆ. ಇದು ರಾಜಸ್ಥಾನದ ಮರಳುಗಾಡಿನಿಂದ ಬರುವ ಬಿಸಿ ಗಾಳಿಯನ್ನು ನಿಲ್ಲಿಸುತ್ತಿತ್ತು. , ಇಲ್ಲದಿದ್ದರೆ ದೆಹಲಿಯ ಅರ್ಧದಷ್ಟು ಇಷ್ಟರಲ್ಲಾಗಲೇ ಮರುಭೂಮಿಯಾಗಿ ಬಿಡಬೇಕಿತ್ತು. ರಿಡ್ಜ್ ಈಗ ಸಂರಕ್ಷಿತ ಅರಣ್ಯ ಪ್ರದೇಶವಾಗಿದೆ. ಇದಕ್ಕಾಗಿ ಬಹುಶಃ ನಿಮ್ಮ ಕಾಲದಲ್ಲೇ ಹೋರಾಟ ಆರಂಭವಾಗಿತ್ತು. ಸರಿ ತಾತ, ಒಂದು ವಿಷಯ ಹೇಳಿ. ರಿಡ್ಜ್ ನಿಜವಾಗಿಯೂ ದೆಹಲಿಯ 'ಹಸಿರು ಶ್ವಾಸಕೋಶ' ಎಂದು ನಮಗೆ ಇಷ್ಟು ವರ್ಷಗಳವರೆಗೆ ತಿಳಿದಿರಲಿಲ್ಲವೇ? ಅದಿಲ್ಲದಿದ್ದರೆ ದೆಹಲಿಯ ಉಸಿರು ಕಟ್ಟುತ್ತದೆ. ಉಸಿರುಗಟ್ಟಿಸುತ್ತದೆ.... ಈಗ ಅದು ಸಂರಕ್ಷಿತ ಅರಣ್ಯ. ಅಲ್ಲಿ ಹಕ್ಕಿಗಳು ಚಿಲಿಪಿಲಿಗುಟ್ಟುತ್ತವೆ. ತುಘಲಕಾಬಾದ್ ಮತ್ತು ಇತರ ಪ್ರದೇಶಗಳ ಎಲ್ಲಾ ಕೋತಿಗಳು ಈಗ ರಿಡ್ಜ್‌ನಲ್ಲಿಯೇ ಬಂದು ನೆಲೆಸಿವೆ. ಅಜ್ಜ, ನಾಳೆ ಏನಾಗಬಹುದೋ ಎಂದು ಅಪ್ಪ ಹೇಳುತ್ತಲೇ ಇರುತ್ತಾನೆ. ದೆಹಲಿಯ ಜನಸಂಖ್ಯೆ ದಿನದಿಂದ ದಿನಕ್ಕೆ ಹೆಚ್ಚುತ್ತಿದೆ. ಅದರ 'ಅಭಿವೃದ್ಧಿ'ಯೂ ವೇಗವಾಗಿದೆ. ಕಾಂಕ್ರೀಟ್ ಕಾಡು ದಟ್ಟವಾಗುತ್ತಿದೆ. ಯಾಂತ್ರಿಕ ಪ್ರಾಣಿಗಳ ಸಂಖ್ಯೆ ಮತ್ತು ಅವುಗಳ ಕರ್ಕಶ ಶಬ್ದ ಹೆಚ್ಚುತ್ತಿದೆ. ಬೆಳೆಯುತ್ತಿರುವ ಕೈಗಾರಿಕಾ ಘಟಕಗಳ ಚಿಮಣಿಗಳು ಪ್ರತಿ ಕ್ಷಣವೂ ಗಾಳಿಯಲ್ಲಿ ಹೊಗೆಯನ್ನು ಉಗುಳುತ್ತಿವೆ..... ಹಾಗಾದರೆ, ಮುಂಬರುವ ಭವಿಷ್ಯದಲ್ಲಿ ಏನಾಗಬಹುದು? ನಾವು ನಿಮಗೆ ಏನು ಬಿಟ್ಟು ಹೋಗುತ್ತೇವೆ? ಎಂದು ಅಪ್ಪ ಹೇಳುತ್ತಲೇ ಇರುತ್ತಾರೆ. ಅಷ್ಟೇ?. ನಾಳೆ ನಿಮ್ಮ ಮಕ್ಕಳೂ ಕೇಳುತ್ತಾರೆ, ನೀವು ನಮಗೆ ಏನು ಕೊಟ್ಟಿರಿ ಅಂತ ಕೇಳಬಹುದು ಎನ್ನುತ್ತಾರೆ. ಇದಕ್ಕೆ ನಿಮ್ಮ ಉತ್ತರ ಏನು ಅಜ್ಜಾ? ಅಜ್ಜ, ಏನಂತ ಉತ್ತರಿಸಬಹುದು? ದೆಹಲಿಯ ಇತಿಹಾಸದ ಸಚಿತ್ರ ಪುಸ್ತಕಗಳ ಪುಟಗಳನ್ನು ತಿರುಗಿಸುವಾಗ, ನಮ್ಮ ಮನಸ್ಸಿನಲ್ಲಿ ಅದೇ ಪ್ರಶ್ನೆ ಏಳುತ್ತದೆ – ನೀವೆಲ್ಲ ಸೇರಿ ನಮಗೆ ಏನು ಕೊಟ್ಟಿರಿ? ಸೂರ್ಯನು ಕಾಣಿಸದ ಅಪಾರ್ಟ್ಮೆಂಟ್! ಲಕ್ಷಗಟ್ಟಲೆ ಸ್ಕೂಟರ್‌ಗಳು, ಮೋಟಾರು ಕಾರುಗಳು ಮತ್ತು ಬಸ್‌ಗಳ ಅಬ್ಬರ, ಕಿರುಚಾಟದೊಂದಿಗೆ ಕಿವಿಯೋಲೆಗಳನ್ನು ಹರಿದುಕೊಂಡು ಗಾಳಿಯಲ್ಲಿ ವಿಷವನ್ನು ಉಗುಳುತ್ತಿರುವ ರಸ್ತೆಗಳು! ನಾವು ಉಸಿರಾಡಲು ಸಹ ಸಾಧ್ಯವಾಗದ ಗಾಳಿ! ಯಾವ ಬೀಜವೂ ಮೊಳಕೆಯೊಡೆಯದ ಭೂಮಿ! ಅದಕ್ಕಾಗಿಯೇ ಇಂದು ನಾವು 'ಸ್ಮೃತಿ ವನ'ಕ್ಕೆ ಹೋಗುತ್ತಿದ್ದೇವೆ. ಇದು ರಿಡ್ಜ್ ಪ್ರದೇಶದಲ್ಲಿದೆ. ನಾವು ದೆಹಲಿಯ ಹಸಿರು ಶ್ವಾಸಕೋಶದ ಶಕ್ತಿಯನ್ನು ಹೆಚ್ಚಿಸಬೇಕು ಎಂದು ನಿರ್ಧರಿಸಿದ್ದೇವೆ. ಅಲ್ಲಿ ಮರ ನೆಡಲು ಅಪ್ಪ ಹೇಗೋ ಕಷ್ಟಪಟ್ಟು ಅನುಮತಿ ಪಡೆದಿದ್ದಾರೆ. ಇದಕ್ಕಾಗಿ ಸಾವಿರಾರು ರೂಪಾಯಿ ಖರ್ಚಾಗುತ್ತದೆ. ಆದರೆ, ಅಲ್ಲಿ ಗಿಡ ನೆಡಬಹುದು ಅಂತನ್ನುವುದೇ ಸಂತಸದ ವಿಚಾರ. ಈ ಹಿಂದೆ, ಸತ್ತ ಆತ್ಮೀಯರ ನೆನಪಿಗಾಗಿ ಮಾತ್ರ ಇಲ್ಲಿ ಮರಗಳನ್ನು ನೆಡಲಾಗುತ್ತಿತ್ತು. ಈಗ ನಾವು ಮುಂದಿನ ಪೀಳಿಗೆಗೆ ಉಸಿರು ನೀಡಲು ಮರಗಳನ್ನು ನೆಡಬಹುದು. ನಾವು ನೆಟ್ಟ ಮರಗಳಿಗೆ ನಿಮ್ಮ ಮತ್ತು ಅಜ್ಜಿಯ ಹೆಸರನ್ನು ಇಡಬೇಕೆಂದಿದ್ದೇವೆ. ಈ ಮರವು ನಿಮ್ಮ ಕಡೆಯಿಂದ ನಮಗೆ, ಮತ್ತು ನಮ್ಮ ನಂತರ ಬರುವವರಿಗೆ ಬಳುವಳಿ ಎನ್ನಿ. ಸರಿ ಅಜ್ಜ, ಉಳಿದದ್ದನ್ನು ಮುಂದಿನ ಪತ್ರದಲ್ಲಿ ಬರೆಯುತ್ತೇನೆ. ಅಜ್ಜಿಗೆ ನನ್ನ ನಮನಗಳನ್ನು ತಿಳಿಸಿ.

ನಿಮ್ಮ ಪ್ರೀತಿಯ ಮೊಮ್ಮಗ

– ಮುಕುಲ್

o

**ಶ್ರೀ ದೇವೇಂದ್ರ ಮೇವಾರಿ ಅವರು ಹಿರಿಯ ಹಿಂದಿ ಲೇಖಕರು ಮತ್ತು ವೈಜ್ಞಾನಿಕ ಕಥೆಗಾರರು, ವಿಜ್ಞಾನ ಮತ್ತು ಸಾಹಿತ್ಯ ಎರಡೂ ಕ್ಷೇತ್ರಗಳನ್ನೂ ಒಂದುಗೂಡಿಸಿದ ಲೇಖಕರು. ಐವತ್ತು ವರ್ಷಗಳಿಂದ ಸಾಮಾನ್ಯ ಜನರಿಗೆ ವಿಜ್ಞಾನದ ಬಗ್ಗೆ ತಿಳಿಸುತ್ತಿರುವವರು. ಇಮೇಲ್: dmewari@yahoo.com | ಕನ್ನಡಕ್ಕೆ: ಎ. ಎಸ್. ವಸಂತ**





# “ವೈಜ್ಞಾನಿಕ ಕಥೆಗಳೂ ಮಹತ್ವವೇ.”

## – ಡಾ. ಶಾಂತಲಾ



ಸಂವಾದ

ಕೊಳ್ಳೇಗಾಲ ಶರ್ಮ

ಬೆಂಗಳೂರಿಗರಾದ ಕಲೆಗಾರ್ತಿ, ಕಥೆಗಾರ್ತಿ. ಕಥೆಗಳಲ್ಲಿಯೂ ವಿಶೇಷವಾಗಿ ವೈಜ್ಞಾನಿಕ ಪ್ರಕಾರಗಳನ್ನೇ ಆಯ್ದುಕೊಂಡ ಡಾ. ಶಾಂತಲಾ. ಆರ್, ಹಿರಿಯ ಪ್ರಸೂತಿ ತಜ್ಞೆ. ವೃತ್ತಿಯಲ್ಲಿ ವೈದ್ಯೆ. ಆದರೆ ಹಲವು ಪ್ರವೃತ್ತಿಗಳು. ಹಲವಾರು ಕಾದಂಬರಿಗಳನ್ನು ಪ್ರಕಟಿಸಿದ್ದಾರೆ. ಪ್ರಶಸ್ತಿಯನ್ನೂ ಗಳಿಸಿದ್ದಾರೆ. ಹಾಗೆಯೇ ತಮ್ಮದೇ ಕಲಾಕೃತಿಗಳನ್ನು ಏಕವ್ಯಕ್ತಿ ಪ್ರದರ್ಶನದಲ್ಲಿ ತೆರೆದಿಟ್ಟ ಪ್ರತಿಭಾವಂತೆ. ಕನ್ನಡದಲ್ಲಿ ವೈಜ್ಞಾನಿಕ ಕಥೆಗಾರಿಕೆ ಕಡಿಮೆಯಾಗುತ್ತಿದೆ ಎನ್ನುವ ಕಾಲದಲ್ಲಿ ಸೂಪರ್‌ನೋವದಂತೆ ಗೋಚರಿಸಿ, ಪ್ರಖರವಾಗಿ ಬೆಳಗುತ್ತಿರುವ ತಾರೆ. ಕುತೂಹಲಿಯೊಟ್ಟಿಗೆ ವೈಜ್ಞಾನಿಕ ಕಥೆಗಳ ಕ್ಷೇತ್ರ ಹಾಗೂ ತಾವು ಈ ಕ್ಷೇತ್ರಕ್ಕೆ ಕಾಲಿಡಲು ಪ್ರೇರಣೆ ಕುರಿತು ಮನದಾಳದಿಂದ ಮಾತನಾಡಿದ್ದಾರೆ.

● **ಕುತೂಹಲಿ:** *ವೃತ್ತಿಯಿಂದ ವೈದ್ಯರಾಗಿ ನೀವು ವೈಜ್ಞಾನಿಕ ಕಥೆಗಳನ್ನು ಬರೆಯುತ್ತಿದ್ದೀರಿ. ಈ ಆಸಕ್ತಿ ನಿಮಗೆ ಬಂದಿದ್ದು ಹೇಗೆ?*

**ಡಾ. ಶಾಂತಲಾ:** “ಮೊದಲಿನಿಂದಲೂ ವಿಜ್ಞಾನವೆಂಬ ವಿಸ್ಮಯ ಜಗತ್ತು ನನ್ನನ್ನು ಸದಾ ಬೆರಗುಗೊಳಿಸಿತ್ತು! ಬೇರಾವ ವೃತ್ತಿಯಲ್ಲಿ ನಾನಿದ್ದಿದ್ದರೂ, ಖಂಡಿತ ವೈಜ್ಞಾನಿಕ ಕಥೆಗಳನ್ನು ಬರೆಯುತ್ತಿದ್ದೆ! ಸ್ವಲ್ಪ ಗಮನ ಹರಿಸಿದರೆ ಸಾಕು, ನಮ್ಮನ್ನು ವಿಸ್ಮಯಗೊಳಿಸಿ, ಮತ್ತಷ್ಟು ಕುತೂಹಲ ಕೆರಳಿಸಿ, ತನ್ನತ್ತ ಸೆಳೆದು, ಇನ್ನಷ್ಟು ಸಂಗತಿಗಳನ್ನು ತಿಳಿಸಿ, ಬೆರಗುಗೊಳಿಸುವ ಶಕ್ತಿ ವಿಜ್ಞಾನಕ್ಕೆ ಇದೆ! ಅಲ್ಲದೆ ವಿಜ್ಞಾನದ ಹರಿವು ಅಗಾಧ, ಅದರ ವಿಭಾಗ–ಉಪವಿಭಾಗಗಳು ಅನೇಕಾನೇಕ . ಕ್ರಿಮಿ–ಕೀಟ–ಹುಳು–ಹುಪ್ಪಟೆಗಳ ಅಧ್ಯಯನದಿಂದ ಹಿಡಿದು, ಗ್ರಹ–ನಕ್ಷತ್ರ–ಬ್ಲಾಕ್ ಹೋಲ್–ಅರಿಲ್ವಳಿಗಳ ಖಗೋಳ ಶಾಸ್ತ್ರದವರೆಗೂ ತಿಳಿದುಕೊಳ್ಳಬಹುದಾದ, ರೋಚಕ ವೈಜ್ಞಾನಿಕ ಸಂಗತಿಗಳು ಲೆಕ್ಕಕ್ಕೆ ಸಿಗದಷ್ಟು! ನಿಸರ್ಗದಲ್ಲಿ ನಾವು ತಿಳಿದುಕೊಂಡು, ಕೊಂಡಾಡಿ, ವೈಭವೀಕರಿಸುವಂತಹ ಸಂಗತಿಗಳ ಬಗ್ಗೆ ಚಿಂತಿಸುವುದು ನನಗೆ ಇಷ್ಟ. ವೈಜ್ಞಾನಿಕ ಕಥೆಗಳನ್ನು ಬರೆಯುವಾಗ ಸಾಮಾನ್ಯ ಜ್ಞಾನ ವರ್ಧಿಸುತ್ತದೆ. ನನಗೆ ಹೆಚ್ಚು –ಹೆಚ್ಚು ತಿಳಿದುಕೊಳ್ಳುವ ಆಸೆಯನ್ನು ಇದು ನೀಗಿಸುತ್ತಾ ಬಂದಿದೆ. ಹಾಗಾಗಿ ನನಗೆ ವೈಜ್ಞಾನಿಕ ಚಿಂತನೆ ಹಾಗು ಕಥೆಗಳನ್ನು ಬರೆಯುವುದು ಹೆಚ್ಚು ಇಷ್ಟವಾದವು”.

● **ಕುತೂಹಲಿ:** *ಕನ್ನಡದಲ್ಲಿ ವೈಜ್ಞಾನಿಕ ಕಥೆಗಳ ಪ್ರಕಾರ ಹೆಚ್ಚು ಬೆಳೆದಿಲ್ಲ ಎನ್ನುವ ವಾದವಿದೆ.* ಇದು *ನಿಜವೇ? ನಿಜವಾಗಿದ್ದರೆ ಕಾರಣವೇನಿರಬಹುದು?*

**ಡಾ. ಶಾಂತಲಾ:** “ನನಗೆ ತಿಳಿದ ಹಾಗೆ ಬೆಂಗಾಲಿಯಲ್ಲಿ ವೈಜ್ಞಾನಿಕ ಕಥೆಗಳನ್ನು ಬರೆಯುವವರು ಹಾಗೂ ಓದುವವರು ಹೆಚ್ಚು ಇದ್ದಾರೆ. ನಂತರ ಬಹುಶಃ ಮರಾಠಿಯಲ್ಲಿ ಇರಬಹುದು. *(ಡಾ. ಪೋಂಡ್ಸೆ ಅವರ ಸಂದರ್ಶನವನ್ನು ಓದಿ... ಸಂ).* ಹಾಗಂತ ಅಲ್ಲಿನ ಜನ ಹೆಚ್ಚು ಪ್ರಬುದ್ಧರು ಎಂದು ಹೇಳಲಾಗುವುದಿಲ್ಲ. ಬಹುಶಃ ಹೊಸ ಪ್ರಕಾರಗಳಲ್ಲಿ ಪ್ರಯತ್ನ ಮಾಡುವುದರಲ್ಲಿ ನಾವು ಹಿಂದುಳಿದಿದ್ದೇವೆ. ಓದುಗರ ಸಂಖ್ಯೆಯೇ ಕಡಿಮೆಯಾಗುತ್ತಿರುವ ಈ ಕಾಲದಲ್ಲಿ, ಜನ ಮೆಚ್ಚುವುದನ್ನೇ ಪ್ರಕಟಿಸಬೇಕೆಂಬ ಧೋರಣೆ ಪ್ರಕಾಶಕರದ್ದು, ಅವರು ಪ್ರಕಟಿಸಿದ್ದನ್ನೇ ಓದುವ ಪರಿಸ್ಥಿತಿ ಓದುಗರದ್ದು. ಈ ವರ್ತುಲದಿಂದ ಹೊರಬರಲು ಎರಡೂ ಕಡೆಯಿಂದ ಪ್ರಯತ್ನ ಬೇಕು. ಪ್ರಾಮಾಣಿಕವಾಗಿ ಬರೆಯುವ

ಕಥೆಗಾರರು ಯಾರೂ ಓದುಗರಿಲ್ಲವೆಂದು ಬರೆಯದೇ ಸುಮ್ಮನಿರುವುದಿಲ್ಲ! ಸಾಮಾಜಿಕ ಜಾಲತಾಣಗಳು ಹಾಗೂ ಟಿ. ವಿ ಧಾರಾವಾಹಿಗಳೂ ಸಾಮಾನ್ಯ ಓದುಗರನ್ನೂ ತಮ್ಮತ್ತ ಸೆಳೆದುಕೊಂಡು ಬಿಟ್ಟಿವೆ. ಅಲ್ಲದೆ ಕೆಲವು ಜನರಲ್ಲಿ ವಿಜ್ಞಾನವನ್ನು ಶಾಲೆ ಕಾಲೇಜುಗಳಲ್ಲಿ ಅರ್ಥ ಮಾಡಿಕೊಳ್ಳುವುದೇ ಕಷ್ಟ ಎನ್ನುವ ಅಭಿಪ್ರಾಯವಿದೆ. ಅಂತಹವರಿಗೆ ಅದರ ವಿಷಯದ ಬಗ್ಗೆಯೇ ಕಥೆ ಓದುವುದು ರುಚಿಸದೆ ಇರಬಹುದು! ಇಂತಹವರು ಒಂದೆರಡು ವೈಜ್ಞಾನಿಕ ಕಥೆಗಳನ್ನು ಓದಿದರೆ ಖಂಡಿತ ಇನ್ನಷ್ಟು ಓದುತ್ತಾರೆ ಎಂಬ ನಂಬಿಕೆ ನನಗಿದೆ. ವಿಜ್ಞಾನ ಅಷ್ಟು ಕುತೂಹಲ ಹಾಗೂ ವಿಸ್ಮಯಕಾರಿ! 'ದೆವ್ವಗಳ ಕಥೆಯನ್ನು ದೆವ್ವಗಳು ಓದಿಕೊಳ್ಳಲಿ ಎಂದು ಬರೆಯುತ್ತಾರೆಯೇ?' ಹಾಗೇ ವೈಜ್ಞಾನಿಕ ಕಥೆಗಳನ್ನು ವಿಜ್ಞಾನಿಗಳಿಗಾಗೆಯೇ ಎಂದು ಖಂಡಿತಾ ಬರೆದಿರುವುದಿಲ್ಲ. ಜನಸಾಮಾನ್ಯರು ವಿಜ್ಞಾನವನ್ನು ತಿಳಿದುಕೊಂಡು ಖುಷಿಪಡಲಿ ಎಂಬುದು ಉದ್ದೇಶವಾಗಿರುತ್ತದೆ!"

● **ಕುತೂಹಲಿ:** *ನಿಮ್ಮ ಪ್ರಕಾರ ವೈಜ್ಞಾನಿಕ ಕಥೆಗಾರರಿಗೆ ಇರಬೇಕಾದ ಗುಣಗಳೇನು?*

**ಡಾ. ಶಾಂತಲಾ:** " ಒಂದು ವಸ್ತು, ಘಟನೆ ಅಥವಾ ನೈಸರ್ಗಿಕ ಸಂಗತಿಯ ಬಗ್ಗೆ–ಏನು? ಯಾಕೆ? ಹೀಗೇ ಯಾಕೆ ? ಹಾಗಾಗಬಾರದು ಏಕೆ? ಎಂಬ ಪ್ರಶ್ನೆ–ಚಿಂತನೆಗಳು ಹುಟ್ಟಿಕೊಂಡವೆಂದರೆ, ಅಲ್ಲಿ ಒಂದೆರಡು ವೈಜ್ಞಾನಿಕ ಕಥೆಗಳು ಹುಟ್ಟಿಕೊಳ್ಳುವುದು ಖಂಡಿತ!! ಆದ್ದರಿಂದ ಈ 'ಕುತೂಹಲ' ಎಂಬ ಗುಣ ಬರಹಗಾರರಿಗೆ, ಅದರಲ್ಲೂ ವೈಜ್ಞಾನಿಕ ಕಥೆಗಾರರಿಗೆ ಅಗತ್ಯ. *(ಮುಖಪುಟದ ಲೇಖನ... ಎಣೆಯಿಲ್ಲದ ಕಲ್ಪನೆ, ಕೊನೆಯಿಲ್ಲದ ಬೆರಗು ಓದಿ)*

" ಕೇವಲ ಪ್ರಶ್ನೆಗಳನ್ನು ಹಾಕಿಕೊಂಡು ಭುಜ ಕುಣಿಸಿ ಸುಮ್ಮನಿದ್ದರೆ ವೈಜ್ಞಾನಿಕ ಕಥೆಗಳು ಹುಟ್ಟಿಕೊಳ್ಳುವುದಿಲ್ಲ. ನಮಗೆ ವಿಸ್ಮಯ ತರಿಸಿದ ಸಂಗತಿಯ ಬಗ್ಗೆ ಹೆಚ್ಚು ತಿಳಿದುಕೊಳ್ಳುವುದೂ ಮುಖ್ಯ. ಇಂದಿನ ಗೂಗಲ್ ಯುಗದಲ್ಲಿ ಇದು ಬಹಳ ಸುಲಭ. ಹೆಚ್ಚು ಹೆಚ್ಚು ತಿಳಿದುಕೊಳ್ಳುತ್ತಿದ್ದಂತೆಯೇ, ಮೆದುಳಿನಲ್ಲಿ ಹುಟ್ಟಿದ ವಿಷಯ ಮತ್ತಷ್ಟು ಸಂಗತಿಗಳನ್ನು ಸಂಗ್ರಹಿಸಿ, ಪಾತ್ರಗಳನ್ನು ಸೃಷ್ಟಿಸಿ, ಕಥೆಯನ್ನು ಮತ್ತಷ್ಟು ಅಚ್ಚುಕಟ್ಟಾಗಿ ತಯಾರಾಗುತ್ತದೆ !!

"ವೈಜ್ಞಾನಿಕ ಕಥೆಗಾರರಿಗೆ ಇರಬೇಕಾದ ಮತ್ತೊಂದು ಗುಣವೆಂದರೆ ಜ್ಞಾನಾರ್ಜನೆಯಲ್ಲಿ ಆಸಕ್ತಿ!!

ಇನ್ನು ಕಥಾವಸ್ತು ಹುಡುಕುವುದು. ಇದಕ್ಕಂತೂ ಕೊರತೆಯೇ ಇಲ್ಲ!! ನಮ್ಮ ಕ್ಷೇತ್ರಗಳಲ್ಲಿಯೇ ಸ್ವಲ್ಪ ಮನಸಿಟ್ಟು ಹುಡುಕಿದರೆ ಕಥಾವಸ್ತುಗಳು



ಸುಲಭವಾಗಿ ಸಿಗುತ್ತವೆ. ಉದಾಹರಣೆಗೆ – ಒಬ್ಬ ಮೇಧಾವಿ ಅಥವಾ ಎಲ್ಲರಿಗಿಂತ ಭಿನ್ನವಾಗಿ ಇರುವ ಶಿಷ್ಯನ ಜಾಡು ಹಿಡಿಯುವ ಅಧ್ಯಾಪಕರು, ವಿಚಿತ್ರವಾದ ಉಡುಗೆಯಲ್ಲಿ ಯಾವುದೋ ಭಾಷೆಯಲ್ಲಿ ಮಾತನಾಡುವ ಗ್ರಾಹಕ (ಕಾಲಯಾನಿ? –Time traveller ) ಹೀಗೆ! ಇತ್ತೀಚೆಗೆ ಶೋಧವಾದ ಸಂಗತಿಗಳು ಹಾಗೂ ಆವಿಷ್ಕಾರಗಳ ಬಗ್ಗೆ ತಿಳಿದುಕೊಂಡು ಸ್ವಲ್ಪ ಕಲ್ಪನೆಯನ್ನು ಸೇರಿಸಿ ಬೆಳೆಸಿಕೊಂಡು ಹೋದರೆ ಒಳ್ಳೆಯ ಕಥಾವಸ್ತುಗಳು ಹುಟ್ಟಿಕೊಳ್ಳುತ್ತವೆ!

"ವೈಜ್ಞಾನಿಕ ಬರಹಗಾರರಿಗೆ ಕಲ್ಪನಾಶಕ್ತಿಯೂ ಬಹಳ ಮುಖ್ಯವಾಗುತ್ತದೆ. ಫ್ಯಾಂಟಸಿ, ಮಾಂತ್ರಿಕತೆಯ.(Fantasy , Magic) ಬಗ್ಗೆ ಬರೆಯುವವರಿಗೆ ಇರುವ ಕಲ್ಪನಾ ಶಕ್ತಿಯಷ್ಟೆ ವೈಜ್ಞಾನಿಕ ಕಥೆಗಾರರಿಗೂ ಅಗತ್ಯ. ಆದರೆ ಮಾಯಾ–ಯಂತ್ರದ ಬಗ್ಗೆ ಬರೆಯಲು ವೈಜ್ಞಾನಿಕ ಬುನಾದಿ ಇಲ್ಲದೆಯೂ. ವೈಜ್ಞಾನಿಕ ಕಥೆಗಳಿಗೆ ವಿಜ್ಞಾನದ ಬುನಾದಿ ಇರಲೇ ಬೇಕು!!

"ಕೊನೆಯದಾಗಿ, ನಮ್ಮ ಸುತ್ತಮುತ್ತಲಿನ ಆಗುಹೋಗುಗಳನ್ನು ವೈಜ್ಞಾನಿಕ ದೃಷ್ಟಿಕೋನದಿಂದ ನೋಡುವುದನ್ನು ರೂಢಿಸಿಕೊಳ್ಳುವುದು ಅತ್ಯಗತ್ಯ."

● **ಕುತೂಹಲಿ:** *ವೈಜ್ಞಾನಿಕ ಕಥೆಗಳನ್ನು ಗಂಭೀರ ಸಾಹಿತ್ಯವೆಂದು ಪರಿಗಣಿಸಬಹುದೇ? ಅವು ಕೇವಲ ವಿಜ್ಞಾನದ ಪರಿಕಲ್ಪನೆಗಳನ್ನು ತಿಳಿಸಿಕೊಡುವ ಮಾಧ್ಯಮವೋ, ವಿಜ್ಞಾನದ ಆಗುಹೋಗುಗಳ ವಿಮರ್ಶೆಯೋ? ನಿಮ್ಮ ಅಭಿಪ್ರಾಯ?!*

**ಡಾ. ಶಾಂತಲಾ:** "ಗಂಭೀರ ಸಾಹಿತ್ಯ ಏನೆಂಬುದನ್ನು ವಿಮರ್ಶಿಸಬೇಕಾಗುತ್ತದೆ!! ಕೇವಲ ಸಾಮಾಜಿಕ, ಐತಿಹಾಸಿಕ ಘಟನೆ ಅಥವಾ ಕಥೆಗಳು ಅಥವಾ ಭಾಷೆಯನ್ನು ವೃದ್ಧಿಸುವ ಸಲುವಾಗಿ ಬರೆಯುವ ಬರೆವಣಿಗೆಗಳು ಮಾತ್ರ ಗಂಭೀರವೆ? ಪ್ರಚಲಿತವಾಗಿರುವ ವಿಜ್ಞಾನವನ್ನು ಅರ್ಥೈಸಿಕೊಂಡು, ಅದರ ಹರಿವನ್ನು ಪರಿಗಣಿಸಿ, ಮುಂದೊಂದು ದಿನ ಆಗಬಹುದಾದ ಘಟನೆಗಳ ಬಗ್ಗೆ ಬರೆಯುವುದು, ಎಚ್ಚರಿಸುವುದು, ಜನಸಾಮಾನ್ಯರಲ್ಲಿ ಆಸಕ್ತಿ–ಕುತೂಹಲ ಮೂಡಿಸುವುದು ಗಂಭೀರವಲ್ಲವೇ?' ವಿಜ್ಞಾನ ಕೇವಲ ಸತ್ಯಗಳನ್ನು ಕ್ರೋಢೀಕರಿಸಿಕೊಂಡು ಬೆಳೆಯುವ ಸಂಗತಿಯಲ್ಲ. ಹೊಸ ಪರಿಕಲ್ಪನೆಗಳ ನಿರಂತರ ಸುಧಾರಣೆಯಿಂದ ಬೆಳೆಯುವಂಥದ್ದು,' (Science advances not by accumulation of new facts , but by the continuous development of new concepts) ಎಂದು ಅಮೆರಿಕಾದ ವಿಜ್ಞಾನಿ ಜೇಮ್ಸ್ ಬ್ರಯಾಂಟ್ ಕಾನಂಟ್ ಹೇಳಿದ್ದರು. ಅಂದರೆ ವಿಜ್ಞಾನ ಬೆಳೆಯುವುದು ಹೊಸ ಸಂಗತಿಗಳನ್ನು ಕಲೆಹಾಕುವುದರಿಂದ ಅಲ್ಲ, ಪರಿಕಲ್ಪನೆಗಳನ್ನು ಪೋಷಿಸಿ ಬೆಳೆಸುವುದರಿಂದ! ವೈಜ್ಞಾನಿಕ ಕಥೆ–ಕಾದಂಬರಿಗಳು ಈ ನಿಟ್ಟಿನಲ್ಲಿ ಬಹಳವಾಗಿ ಕೆಲಸ ಮಾಡುತ್ತವೆ. ಜನರು–ಸಾಹಿತಿಗಳು ಇದನ್ನು ಗಂಭೀರ ಸಾಹಿತ್ಯವಲ್ಲ ಎಂದು ಪರಿಗಣಿಸಿದ ಮಾತ್ರಕ್ಕೆ ಇದು ತನ್ನ ಮಹತ್ವ–ಪ್ರಸಕ್ತತೆಯನ್ನು ಖಂಡಿತ ಕಳೆದುಕೊಳ್ಳುವುದಿಲ್ಲ.

● **ಕುತೂಹಲಿ:** ಕನ್ನಡದಲ್ಲಿ ನಿಮಗೆ ಬಹಳ ಮೆಚ್ಚುಗೆಯಾದ, ಮಾದರಿ ಎನ್ನಿಸುವ ವೈಜ್ಞಾನಿಕ ಕಥೆ, ಕಾದಂಬರಿಗಳು ಯಾವುವು?

**ಡಾ. ಶಾಂತಲಾ:** "ನಾನು ಹೆಚ್ಚು ಆಂಗ್ಲ ಬರಹ, ಕಾದಂಬರಿಗಳನ್ನು ಓದಿದವಳು. ಅದೂ ಆರಂಭದಲ್ಲಿ ಅಷ್ಟೇ. ನಂತರ ನನ್ನ ಚಿಂತನೆಗಳಿಗೇ ರೂಪು–ರೆಕ್ಕೆಗಳನ್ನು ಕೊಟ್ಟು ಬರೆಯುವಲ್ಲಿ ನಿರತಳಾಗಿಬಿಟ್ಟೆ! ನನ್ನ ಮೆಚ್ಚಿನ ಕಥೆಗಾರ, ಐಸಾಕ್ ಅಸಿಮೋವ್. ಈತನ ಕಥೆಗಳನ್ನು ಓದುವಾಗಲೇ, ವಿಜ್ಞಾನಿಕ ಸಂಗತಿಗಳನ್ನು ಇಟ್ಟುಕೊಂಡು ಕಥೆ ಬರೆಯಬಹುದು ಎಂದು ಅನಿಸಿದ್ದು. ನಾನು ಪ್ರಯತ್ನ ಮಾಡಬಾರದೇಕೆ ಎನಿಸಿದ್ದು.. ಆಲ್ಡಸ್ ಹಕ್ಸ್ಲಿ ಕೂಡ ನನ್ನ ಮೆಚ್ಚಿನ ಬರಹಗಾರರು."

● **ಕುತೂಹಲಿ:** ಧನ್ಯವಾದಗಳು

○

**ಸಂದರ್ಶಕರು: ಕೊಳ್ಳೇಗಾಲ ಶರ್ಮ, ಕುತೂಹಲಿಯ ಸಂಪಾದಕ**

ಕತೆ





ಚಿತ್ರ: ಶಿಲ್ಪಾಶ್ರೀ ಕಲ್ಲಿಗನೂರು

# ಅಂತರ್ಜಾಲ ಜ್ಞಾಣ

ಸಪ್ನಾ ಕಟ್ಟಿ

ರಾಜಾಜಿನಗರದ ಎಲೈಟ್ ಬ್ಯಾಂಕಿನ ಪ್ರಾದೇಶಿಕ ಶಾಖೆಯ ಸಿಸಿಟಿವಿ ಫುಟೇಜಿನ ಮುಂದೆ ಕುಳಿತಿದ್ದ ಬಲರಾಮನ ತಲೆ ತುಂಬ ಗುಂಗಿಹುಳ. ಕ್ಯಾಮೆರಾವನ್ನೇ ದಿಟ್ಟಿಸಿ ನೋಡುತ್ತಿರುವ ಯುವಕನೊಬ್ಬನ ಒಟ್ಟು ಮೂರು ಫೋಟೋಗಳಿವೆ ಅಲ್ಲಿ. ಅವನ್ನು ನೋಡುವಾಗ ಅನ್ನದಲ್ಲಿ ಕಟ್ಟೆಂದು ಕಲ್ಲು ಸಿಕ್ಕಿದ ಅನುಭವ ಆಯಿತು ಬಲರಾಮನಿಗೆ. ಕೊನೆಯ ಫೋಟೋದಲ್ಲಿ ತನನ್ ಕೊರಳಲ್ಲಿದ್ದ ಸ್ಕಾರ್ಫ್ ತೆಗೆದು ಸಿಸಿಟಿವಿ ಕ್ಯಾಮೆರಾದತ್ತ ತೂರಿದವನ ಮುಖಭಾವ ಸ್ಪಷ್ಟವಾಗಿ ಕಾಣುತ್ತಿದೆ. ಆದರೆ ಅವನ ಮುಖದಲ್ಲಿನ ಆ ಆಶ್ಚರ್ಯ! ಇಂಥಾ ಜಾಗಗಳಲ್ಲಿ ಸಿಸಿಟಿವಿ ಇರೋದು ಗೊತ್ತೇ ಇಲ್ಲ ಎಂಬಂತಹ ಮುಖಭಾವ.

“ಓಂ ಭೂರ್ಭುವಸ್ವಃ. ತತ್ ” ಅವನ ಮೊಬೈಲು ರಿಂಗಣಿಸಿದಾಗ ಅದನ್ನು ಕಿವಿಗೊತ್ತಿಕೊಂಡವನ ಮುಖ ಕೆಂಪಾಗಿ, ಕಪ್ಪಾಗಿ ಕೊನೆಗೆ ದತ್ತೂರದ ಹೂವಿನಂತೆ ಬಿಳಿಚಿಕೊಂಡಿತು.

ಪಕ್ಕದಲ್ಲೇ ನಿಂತಿದ್ದ ಕಾನ್ಸ್‌ಟೇಬಲ್ ಬಾಬಣ್ಣ “ಏನ್ಸಾರ್?! ಏನಾಯ್ತು?!” ಎಂದ.

ಬಲರಾಮನ ನಿರುತ್ತರ ಕಂಡು “ಫೋನ್ ಯಾರ್ದು ಸಾರ್?” ಎಂದ.

ಬಲರಾಮ್: “ಸುದರ್ಶನ್ ಸರ್‌ದು”

ಬಾಬಣ್ಣ: “ನಮ್ಮ ಎಸ್‌ಪಿ ಸಾಹೇಬರಾ?”

ಬಲರಾಮ್: “ಮತ್ತೆಷ್ಟು ಸುದರ್ಶನ್ ಸರ್‌ಗಳು ಗೊತ್ತೋ ನಿನಗೆ?” ಎಂದು ರೇಗಿದ ಬಲರಾಮ್ ಅವನ ಮುಂದೆ ಇಡೀ ವಾಟ್ಸಪ್ ಸಂದೇಶವನ್ನು ಹಿಡಿದ.

ಹೆಸರು: ಶೇಖರ್ ಕಾಂತ್

ತಂದೆಯ ಹೆಸರು: ವಿಜಯ ಕಾಂತ್

ತಾಯಿಯ ಹೆಸರು: ಮೀರಾ ಕಾಂತ್

ಹುಟ್ಟಿದ ದಿನಾಂಕ: 26/12/2000

ವಿಜಯ ಕಾಂತ್ ಮರಣದ ದಿನಾಂಕ: 06/04/2000

ಶೇಖರ್ ಕಾಂತ್ ಮರಣದ ದಿನಾಂಕ: 10/11/2028

ಬಾಬಣ್ಣ: "ಯಾರ್ದುರ್ ಸಾರ್ ಈ ಬಯೋಡೇಟ?"

ಬಲರಾಮ್: "ಸಿಸಿಟಿವಿಯಲ್ಲಿ ಕಾಣಿಸ್ತಿಲ್ಲವೇ? ಅವನದ್ದು."

ಮತ್ತೊಮ್ಮೆ ವಿವರಗಳನ್ನು ಓದಿದ ಬಾಬಣ್ಣ ಸೆಟೆದು ನಿಂತ.

ಬಾಬಣ್ಣ: "ಏನ್ಸಾರ್ ತಮಾಷೆ ಮಾಡ್ತಿದ್ದೀರಾ? ಇದು 2029. ಅಂದರೆ ಅವನು ಆಗಲೆ ಸತ್ತು ವರ್ಷವಾಗ್ತಾ ಬಂತು! ಅವನ ಭೂತಾನಾ ಈ ಬ್ಯಾಂಕ್ ದರೋಡೆ ಮಾಡಿದ್ದು?!"

ಬಲರಾಮ್: "ತಮಾಷೆ ನಾನಲ್ಲಪ್ಪಾ ಮಾಡ್ತಿರೋದು. ಆ ಶೇಖರನೇ ನಮ್ಮ ತಮಾಷೆ ಮಾಡಿ ಹೋಗಿದ್ದಾನೆ."

ಬಾಬಣ್ಣ: "ಬಿಡಿ ಸಾರ್. ನಂಗೊತ್ತಿಲ್ವೆ ನಿಮ್ಮ ಕೆಪಾಸಿಟಿ. ಸತ್ತು ಹೋಗಿದ್ರೂ ಹುಡುಕಿ ತಂದೇ ಬಿಡ್ತೀರಾ ಅವನನ್ನ "

ಇನ್ನೂ ಮುಂದುವರೆಸುತ್ತಿದ್ದನೇನೋ. ಬಲರಾಮ್ ದುರುಗುಟ್ಟುವುದನ್ನು ನೋಡಿ. "ಟೀ ತರಲೇ ಸರ್?" ಎಂದು ಕೇಳುತ್ತಾ ಅಲ್ಲಿಂದ ಜಾಗ ಖಾಲಿ ಮಾಡಿದ.

***

ಟೀ ಹೀರಿದ ಬಲರಾಮ ಬಾಬಣ್ಣನನ್ನು ಹೊರಗೆ ಕಳಿಸಿ, ತಲೆಯ ಹಿಂದೆ ಕೈ ಕಟ್ಟಿ ಕುರ್ಚಿಗೆ ಒರಗಿದ. ಡಿಜಿಟಲ್ ಫೋರೆನ್ಸಿಕ್ ಸೈನ್ಸ್ ಲ್ಯಾಬಿಗೆ ಕಳಿಸಿದ್ದ ಸಂದೇಶಕ್ಕೆ ಉತ್ತರ ಮೊಬೈಲ್ ಪರದೆಯ ಮೇಲೆ ಬೆಳಗಿತ್ತು. ಶೇಖರನ ಆಮೂಲಾಗ್ರ ಇತಿಹಾಸ ಅಲ್ಲಿತ್ತು.

ಬಲರಾಮ ಶೇಖರನ ಜನ್ಮದಿನಾಂಕದತ್ತ ಇನ್ನೊಮ್ಮೆ ದೃಷ್ಟಿ ಹರಿಸಿದ. ಮಗ ಹುಟ್ಟಿದ್ದು ಡಿಸೆಂಬರ್ 2000ದಲ್ಲಿ. ಅಪ್ಪ ಸತ್ತಿದ್ದು ಅದೇ ವರ್ಷ ಏಪ್ರಿಲ್‌ನಲ್ಲಿ. ಓಹ್. ಪಾಪ! ಶೇಖರ ತಂದೆಯ ಮುಖವನ್ನೇ ನೋಡದ ಪೋಸ್ತುಮಸ್ ಬೇಬಿ! ಮೀರಾ ಗರ್ಭ ಧರಿಸಿದ ಕೆಲವೇ ದಿನಗಳಲ್ಲಿ ಪತಿಯನ್ನು ಕಳೆದುಕೊಂಡ ದುರ್ಭಾಗ್ಯೆ!

ಶೇಖರ ಓದಿದ್ದು ಬೆಂಗಳೂರಿನ ಎಸ್. ಎಲ್.ಬಿ. ಕಾಮರ್ಸ್ ಕಾಲೇಜಿನಲ್ಲಿ. ಡಿಗ್ರಿಯ ನಂತರ ಯಾವುದೋ ಗುಳಿಗೆಯ ರ್‍ಯಾಪರ್ ತಯಾರಿಸುವ ಕಂಪೆನಿಯಲ್ಲಿ ಅಕೌಂಟಂಟ್ ಕೆಲಸದಲ್ಲಿದ್ದ. ಹೀಗೆ ಎರಡು ಮೂರು ವರ್ಷಗಳಲ್ಲಿ ಆತ ಬದಲಾಯಿಸಿದ್ದು ಆರು ನೌಕರಿಗಳು! ಕಡೆಗೆ 2028ರಲ್ಲಿ ಆತ್ಮಹತ್ಯೆ! ಕಾರಣ: ತೀವ್ರ ಒತ್ತಡ ಮತ್ತು ನಿರಾಸೆ.

"ಸೋ. ಸಂಬಂಧಿಸಿರೋ ಮೂವರಲ್ಲಿ ಇಬ್ಬರು ಜಗತ್ತೇ ಬಿಟ್ಟು ಹೋಗಿಯಾಗಿದೆ. ಇನ್ನುಳಿದದ್ದು ಮೀರಾ! ಅವಳನ್ನು ಹುಡುಕುವುದೊಂದೇ ಉಳಿದ ದಾರಿ" ಎಂದು ತನಗೆ ತಾನೇ ಹೇಳಿಕೊಂಡ ಬಲರಾಮ್, ಲ್ಯಾಪ್ ಟಾಪ್ ತೆರೆದು ಗೂಗಲಿನಲ್ಲಿ "ಮೀರಾ ಕಾಂತ್" ಎಂದು ಟೈಪಿಸಿದ. ಬರೋಬ್ಬರಿ ಇಪ್ಪತ್ತೈದು ಮೀರಾ ಕಾಂತ್ ಗಳು ಪರದೆಯ ಮೇಲೆ ಮಿಂಚಿದರು. ಟೀ ಬಿದ್ದ ಮಿದುಳು ಈಗ ಚೆನ್ನಾಗಿ ಕೆಲಸ ಮಾಡುತ್ತಿತ್ತು. "ಶೇಖರ ಈಗ ಬದುಕಿದ್ದರೆ ಅವನಿಗೆ 28 ವರ್ಷವಾಗಿರುತ್ತಿತ್ತು. ಮೀರಾಳಿಗೆ ಸುಮಾರು 25 ವರ್ಷವಾಗಿದ್ದಾಗ ಶೇಖರ ಹುಟ್ಟಿರಬಹುದಾದರೆ, 28+25, ಮೀರಾ ಈಗ ಸುಮಾರು ಐವತ್ತಮೂರು ಆಸುಪಾಸಿನ

**ಶೇಖರ ಓದಿದ್ದು ಬೆಂಗಳೂರಿನ ಎಸ್. ಎಲ್.ಬಿ. ಕಾಮರ್ಸ್ ಕಾಲೇಜಿನಲ್ಲಿ. ಡಿಗ್ರಿಯ ನಂತರ ಯಾವುದೋ ಗುಳಿಗೆಯ ರ್‍ಯಾಪರ್ ತಯಾರಿಸುವ ಕಂಪೆನಿಯಲ್ಲಿ ಅಕೌಂಟಂಟ್ ಕೆಲಸದಲ್ಲಿದ್ದ. ಹೀಗೆ ಎರಡು ಮೂರು ವರ್ಷಗಳಲ್ಲಿ ಆತ ಬದಲಾಯಿಸಿದ್ದು ಆರು ನೌಕರಿಗಳು! ಕಡೆಗೆ 2028ರಲ್ಲಿ ಆತ್ಮಹತ್ಯೆ! ಕಾರಣ: ತೀವ್ರ ಒತ್ತಡ ಮತ್ತು ನಿರಾಸೆ.**

ವಯಸ್ಸಿನವಳಾಗಿರಬೇಕು."

ಬಲರಾಮ ಪರದೆಯ ಮೇಲಿದ್ದ ಮೀರಾಗಳಲ್ಲಿ ಐವತ್ತರ ಕೆಳಗಿದ್ದವರ ಪ್ರೊಫೈಲುಗಳನನು ಕಿತ್ತು ಹಾಕುತ್ತಾ ಸಾಗಿದ. ಈಗ ಉಳಿದ ಮೀರಾಕಾಂತ್ ಗಳೆಂದರೆ ನಾಲ್ಕು ಮಂದಿ. ಇಬ್ಬರು ಬೆಂಗಳೂರಿನವರು. ಮತ್ತಿಬ್ಬರು ಇಂದೋರ್ ಮತ್ತು ದೆಹಲಿಯವರು. 'ಕೇಸ್ ಬಗೆಹರಿದರೆ ಅದು ಅಂತರ್ಜಾಲ ಉಪಯೋಗಿಸಿಯೇ', ಎಂದು ಅವನ ಗಟ್ ಫೀಲಿಂಗ್ ಹೇಳುತ್ತಿತ್ತು. ಹೀಗಾಗಿ ಎಸ್‌ಪಿ ಸಾಹೇಬರಿಗೆ ಫೋನಾಯಿಸಿಯೇ ಬಿಟ್ಟ. ಬಲರಾಮನ ಬುದ್ಧಿಮತ್ತೆಯ ಮೇಲೆ ಅಪಾರ ನಂಬುಗೆ ಇಟ್ಟಿದ್ದ ಸುದರ್ಶನ್ ಅವನು ಕೇಳಿದ್ದಕ್ಕೆಲ್ಲ ಅನುಮತಿ ನೀಡಿದ್ದಲ್ಲದೆ, ಎರಡೂ ಪಟ್ಟಣಗಳಿಗೆ ವಿಮಾನದ ಟಿಕೆಟ್ಟು, ಅಲ್ಲಿ ಪೋಲೀಸ್ ಜೀಪು, ನೆರವಿಗೆ ಸಿಬ್ಬಂದಿ ಮತ್ತಿತರೆ ಅನುಕೂಲಗಳನ್ನೆಲ್ಲ ಮಾಡಿಕೊಟ್ಟರು.

***

ಇಂದೋರಿನ ಲೋಕಮಾನ್ಯನಗರ ಬಡಾವಣೆಯ ಆರನೇ ಕ್ರಾಸಿನ ಎರಡಂತಸ್ತಿನ ಬಂಗಲೆಯ ಮುಂದೆ ನಿಂತ ಬಲರಾಮ ತುಸು ಅಪ್ರತಿಭನಾದ. "ಲ್ಯಾಬ್ ಟೆಕ್ನೀಷಿಯನ್ನಿಗೆ ಇಂತಹ ಸಂಬಳ ಕೊಡುವ ಸಂಸ್ಥೆ ಅದ್ಯಾವುದಪ್ಪಾ?" ಅಂತ ಬಂದ ಖಯಾಲನ್ನು ಉದ್ಗಾರವಾಗಲು ಬಿಡದೆ, ಹಸಿರು ಹುಲ್ಲುಹಾಸಿನಗುಂಟ ನಡೆದು ಬಾಗಿಲಿನ ಪಕ್ಕದಲ್ಲಿದ್ದ ಕರೆಗಂಟೆಯೊತ್ತಿದ. ಸೇವಕಿ ತಂದಿತ್ತ ತಂಪುನೀರು ಕುಡಿದು ಸೋಫಾದಲ್ಲಿ ಆಸೀನನಾಗುವ ಹೊತ್ತಿಗೆ, ಸುಮಾರು ಐವತ್ತೈದೆನ್ನಿಸಬಹುದಾದ ವಯಸ್ಸಿನ ಮಹಿಳೆ ಹೊರಬಂದಳು. ನೀಟಾದ ಬಿಳಿ ಚೂಡಿದಾರ್, ಬೆಲೆಬಾಳುವ ಮುತ್ತಿನ ಆಭರಣಗಳು, ತೆಳುವಾ ಮೇಕಪ್ ಮೀರಾಳ ಕಲ್ಲು ಮುಖಕ್ಕೆ ಮಾರ್ದವತೆ ತರಲು ಸೋತಿದ್ದುವು.

ಶೇಖರನ ಸಿಸಿಟಿವಿ ಫೂಟೇಜಿನ ಚಿತ್ರ, ದರೋಡೆಯ ವಿವರಗಳನ್ನು ಹೇಳುತ್ತ ಹೋದಂತೆ ಸೂಕ್ಷ್ಮವಾಗಿ ಅವಳ ಮುಖವನ್ನೇ ದಿಟ್ಟಿಸುತ್ತಿದ್ದವನ ಎದೆಯಲ್ಲಿ ಮತ್ತದೇ ಅಸ್ವಸ್ಥತೆ. ಮೊದಲ ಬಾರಿ ಶೇಖರನ ಫೋಟೋ ನೋಡಿದಾಗಿನಂತೆ ಚಿತ್ರಗಳನ್ನು ನೋಡುತ್ತಾ ಬೆರಗಾಗಿ ಬಾಯಿಯ ಮೇಲೆ ಬೆರಳಿಟ್ಟಿದ್ದಳು. "ಇದೆಂಥಾ ವಿಚಿತ್ರ? ಇವನೆಂತಹ ಬಹುರೂಪಿ?" ಎಂದು ಆಕ್ರೋಶ ವ್ಯಕ್ತಪಡಿಸಿದಳು. ಎಲ್ಲಾ ತೀರಾ ಕರಾರುವಾಕ್! ಎಲ್ಲೆಲ್ಲಿ ಯಾವ್ಯಾವ ಭಾವ ವ್ಯಕ್ತಪಡಿಸಬೇಕೋ ಅಲ್ಲಿ ಎಷ್ಟು ಬೇಕೋ ಅಷ್ಟು ಮುಂಚೆಯೇ ಪ್ರಸಂಗವನ್ನು ಊಹಿಸಿ ಹಲವು ಬಾರಿ ಪ್ರಾಕ್ಟೀಸು ಮಾಡಿದ್ದಾಳೇನೋ ಎನ್ನುವಂತಹ ನಿಖರತೆ!

ಮಾತಿನ ನಡುವೆ ತಟ್ಟನೆ ಒಳಗೆದ್ದು ಹೋಗಿದ್ದವಳು ಹಿಂದುರಿಗಿದಾಗ ಕೈಯಲ್ಲಿ ಯುವಕ ಶೇಖರನ ಫೋಟೋ ಹಿಡಿದಿದ್ದಳು.

"ಸರಿಯಾಗಿ ಹತ್ತು ವರ್ಷ ಕೂಡ ನನ್ನ ಬಳಿಯಲ್ಲಿ ಇರಲಿಲ್ಲ ಅವನು. ಹೀಗೆಯೇ ಆಗೊಮ್ಮೆ, ಈಗೊಮ್ಮೆ ಭೇಟಿಯಾಗಲು ಬರುವನಷ್ಟೆ. ಅಂಥಾ ಸಮಯದಲ್ಲಿ ತೆಗೆದ ಫೋಟೋ ಇದು. ನನ್ನ ಸೋದರ ಮಾವ ನನಗಾಗಿ ಬಿಟ್ಟು ಹೋದ ಈ ಅಪಾರ ಸಂಪತ್ತು, ಈ ಬಂಗಲೆ, ಈ ಸಿರಿ, ಹೀಗೆ ನಾನೊಬ್ಬಳೇ ಇದ್ದೊಬ್ಬ ಮಗನನ್ನೂ ಕಳಕೊಂಡು " ಮಾತು ಮುಂದುವರೆಸದರೆ ಬಿಕ್ಕಿದ್ದಳು.

ಆದರೂ ಬಲರಾಮನಿಗೇಕೋ ಇದು ತಾನು ಮುಂದೆ ಕೇಳಬಹುದಾದ ಪ್ರಶ್ನೆಗಳಿಗೆ ಮುಂಚಿತವಾಗಿಯೇ ಯೋಚಿಸಿ ಕೊಟ್ಟ ಉತ್ತರವಿದು ಎನ್ನಿಸಿತು.

ಕೈಲಿದ್ದ ಫೋಟೋವನ್ನು ಅರೆಗಳಿಗೆ ನಿರುಕಿಸಿದವ, "ವಿತ್ ಯುವರ್ ಪರ್ಮಿಶನ್" ಎನ್ನುತ್ತಾ ಆ ಫೋಟೋದ ಒಂದೆರಡು ಫೋಟೋ ತೆಗೆದ.

ಮರಳುವಾಗ ತಲೆ ತೀರ ನೋಯುತ್ತಿತ್ತು. ಅದೀಗ ತವರು ಮನೆಯಿಂದ ಮರಳಿದ ಕೋಮಲಳ ಮುಖ ಕಂಡಿದ್ದೇ ತುಸು ಗೆಲುವಾದ. ತಲೆಗೆ ಅಮೃತಾಂಜನ ಹಚ್ಚುತ್ತಾ ಇವನ ಕತೆ ಕೇಳಿದವಳು ಒಮ್ಮೆಲೇ ಹೇಳಿದ್ದಳು. "ಛೇ ಪಾಪ. ಅವಳ ಬಗ್ಗೆ ಸುಮ್ಮನೆ ಏನೇನೋ





ಊಹಿಸಬೇಡಿ."

"ಅಲ್ಲ ಕೋಮು. ಅವಳು ಮಗನನ್ನು ನೋಡೋ ಆಸೆನಾ ವ್ಯಕ್ತಪಡಿಸಲೇ ಇಲ್ಲವಲ್ಲ?!"

"ಮಗನನ್ನು ಕಾಣುವ ಹುಚ್ಚಲ್ಲಿ ಅವನು ಸಿಕ್ಕಿ ಜೈಲಿಗೆ ಹೋಗಬಾರದೂಂತ ಅವಳ ವಿಚಾರವಿರಬಹುದಲ್ಲವಾ?". ಸಮಾಧಾನ ಮಾಡಿದಳು ಕೋಮು.

"ಸರಿ. ನೀನೇ ಅಂಥ ಪರಿಸ್ಥಿತಿಯಲ್ಲಿ ಇದ್ದೆ ಅಂದುಕೊ. ವರ್ಷದ ಹಿಂದೆ ಸತ್ತೇ ಹೋದ ಅಂದುಕೊಂಡ ಕರುಳ ಕುಡಿ, ಮರಳಿ ಎಲ್ಲೋ ಕಂಡಿತು ಅಂತ ಯಾರೋ ಹೇಳಿದರೆ, ವಿಚಾರ, ಗಿಚಾರ ಮಾಡ್ತಾ ಕೂರ್ತಾರೋ? ಇಲ್ಲ ಅವರನ್ನು ಹಿಡಿದು ಅಲುಗಿಸಿ, 'ಎಲ್ಲಿ ನನ್ನ ಮಗ? ನಾ ಅವನನ್ನು ನೋಡಬೇಕು" ಅಂತ ಕೂಗ್ತೀಯೋ? ನೀನೇ ಹೇಳು"

"ಅಯ್ಯೋ. ಹೋಗ್ರಿ. ನಾನ್ಯಾಕೆ ಅಂಥ ಅನಿಷ್ಟ ವಿಚಾರ ಮಾಡಲಿ? ಅದೂ ಇನ್ನೂ ಹುಟ್ಟಿಯೇ ಇಲ್ಲದ ಮಗನ ಬಗ್ಗೆ!' ಅಂದವಳೇ ಜಡೆಯನ್ನು ರೊಯ್ಯನೆ ಹಿಂದೆಸೆದು ಅಡುಗೆ ಮನೆಗೆ ನುಗ್ಗಿದ್ದಳು.

ವಿಜಯದ ನಗೆ ಬೀರಿದ್ದ ಬಲರಾಮ.

ಆದರೆ ವಾಟ್ಸಪ್ ವಿವರಗಳ ಮುಂದೆ ಕುಳಿತಾಗ, ಮತ್ತವೇ ಓದಿ, ಓದಿ ಬೇಜಾರಾದ ಶೇಖರನ ವಿವರಗಳು ಕಾಡಿದುವು. "ತಾಯಿಯ ವೃತ್ತಿ: ಲ್ಯಾಬ್ ಟೆಕ್ನೀಷಿಯನ್ ಇನ್ ಸಮ್ ಗವರ್ನಮೆಂಟ್ ಇನ್ಸ್ಟಿಟ್ಯೂಟ್." ಅಂತ ಓದಿದಾಗ ಎಲ್ಲೋ ಎಡವಟ್ಟೆನಿಸಿತು. "ಸಮ್ ಇನ್ಸ್ಟಿಟ್ಯೂಟ್" ಅನ್ನುವುದ್ಯಾಕೋ ನಿಖರ ವಿವರ ಅಲ್ಲ ಅನ್ನಿಸಿ, ಗೂಗಲಿನಲ್ಲಿ ಸೈಂಟಿಫಿಕ್ ಲ್ಯಾಬ್ಸ್ ಇನ್ ರಾಜಾಜಿನಗರ, ಬೆಂಗಳೂರು, ಇನ್ 2000" ಎಂದು ಟೈಪಿಸಿದ. ಯಾವವೋ ನಾಲ್ಕಾರು ಲ್ಯಾಬ್‌ಗಳ ಹೆಸರು ಫ್ಲಾಶ್ ಆದುವು. ಅದರಲ್ಲೊಂದು "ಕ್ರಯೋಪ್ರಿಸರ್ವೇಟಿವ್ ಲ್ಯಾಬ್ ಆಫ್ ಇಂಡಿಯಾ," ತಟ್ಟನೆ ಅವನ ಗಮನ ಸೆಳೆದಿತ್ತು. ಭಾರತದ ಮೊತ್ತ ಮೊದಲ ಭ್ರೂಣ ಸಂಸ್ಕರಣ ಸಂಸ್ಥೆ.

ಅವನೆದೆಯ ನಾಳವೊಂದು ಧಡಬಡಿಸಿ, ತಲೆಗೆ ರಕ್ತ ನುಗ್ಗಿತ್ತು. ಯಾವುದೋ ಎಳೆಯೊಂದು ಕಾಲಿಗೆ ತೊಡರಿದಂತೆನಿಸಿತು. ಅಲ್ಲಲ್ಲಿ ಬಿಚ್ಚುತ್ತಾ, ಕಗ್ಗಂಟುಗಳನ್ನು ಕತ್ತರಿಸುತ್ತಾ ನಡೆದಂತೆ ತಲೆಯಲ್ಲಿ ನಡೆದ ಘಟನೆಗಳ ನಕಾಶೆಯೊಂದು ಸಿದ್ಧವಾಯಿತು.

ತಟ್ಟನೆ ಗೆಳೆಯ ಗೈನಕಾಲಜಿಸ್ಟ್ ಡಾ. ಸುರೇಶ್ ವೈದ್ಯನಿಗೆ ಫೋನು ಮಾಡಿ "ಭ್ರೂಣ ಸಂಸ್ಕರಣೆಯ ಬಗ್ಗೆ ವಿವರಗಳನ್ನು ಕಳಿಸುವಂತೆ ಬೇಡಿಕೊಂಡ. ಆಗ ಅವರು ಸಾಮಾನ್ಯ ಓದುಗರಿಗೆ ಅರ್ಥವಾಗುವಂತಹ ಮಾಹಿತಿಯನ್ನು ಕಳಿಸಿದರು.

'ಸ್ತ್ರೀಯ ಅಂಡಾಶಯದಿಂದ ಅಂಡವನ್ನು



**ಅವನೆದೆಯ ನಾಳವೊಂದು ಧಡಬಡಿಸಿ, ತಲೆಗೆ ರಕ್ತ ನುಗ್ಗಿತ್ತು. ಯಾವುದೋ ಎಳೆಯೊಂದು ಕಾಲಿಗೆ ತೊಡರಿದಂತೆನಿಸಿತು. ಅಲ್ಲಲ್ಲಿ ಬಿಚ್ಚುತ್ತಾ, ಕಗ್ಗಂಟುಗಳನ್ನು ಕತ್ತರಿಸುತ್ತಾ ನಡೆದಂತೆ ತಲೆಯಲ್ಲಿ ನಡೆದ ಘಟನೆಗಳ ನಕಾಶೆಯೊಂದು ಸಿದ್ಧವಾಯಿತು. ತಟ್ಟನೆ ಗೆಳೆಯ ಗೈನಕಾಲಜಿಸ್ಟ್ ಡಾ. ಸುರೇಶ್ ವೈದ್ಯನಿಗೆ ಫೋನು ಮಾಡಿ "ಭ್ರೂಣ ಸಂಸ್ಕರಣೆಯ ಬಗ್ಗೆ ವಿವರಗಳನ್ನು ಕಳಿಸುವಂತೆ ಬೇಡಿಕೊಂಡ.**

ಹೊರತೆಗೆದು, ಫಲೀಕರಿಸಿ, ಭ್ರೂಣವನ್ನು ಸೃಷ್ಟಿಸಿ, ಶೈತ್ಯೀಕರಿಸಲಾಗುತ್ತದೆ. ತಂಪಿನಿಂದ ಧಕ್ಕೆಯಾಗದಂತೆ ಭ್ರೂಣವಿರುವ ಶೈತ್ಯಾಗಾರಕ್ಕೆ ಕ್ರಯೋಪ್ರೊಟೆಕ್ಟಂಟುಗಳನ್ನು ಸೇರಿಸಲಾಗುತ್ತದೆ. ನಂತರ –3210 ಈ ಉಷ್ಣತೆಯಲ್ಲಿ ದ್ರವ ನೈಟ್ರೋಜನ್ನಿನಲ್ಲಿ ಶೇಖರಿಸಿಟ್ಟು, ಬೇಕಾದಾಗ ಮರಳಿ ಸ್ತ್ರೀಯ ಅಂಡಾಶಯಕ್ಕೆ ಸೇರಿಸಿ, ಐವಿಎಫ್ ಮೂಲಕ ಸಂತಾನ ಪಡೆಯಲಾಗುತ್ತದೆ."

ಈ ಕ್ರಮದ ಉದ್ದೇಶವೇನು?" ಲಿಂಗ ಪರಿವರ್ತನೆಯಾಗಬೇಕೆನ್ನುವ ಜನರು ಅಥವಾ ಯಾವುದೇ ಭೀಕರ ರೋಗಕ್ಕೆ ತುತ್ತಾದವರು ಚಿಕಿತ್ಸೆ ಪ್ರಾರಂಭವಾಗುವ ಮುನ್ನ ಈ ರೀತಿ ಮಾಡುತ್ತಾರೆ. ಅಥವಾ ಇತ್ತೀಚೆಗಂತೂ 'ಕರಿಯರ್'ಗಳಲ್ಲಿ ಮುಳುಗಿರುವ ಯುವದಂಪತಿಗಳು 'ತಮಗೀಗಲೇ ಮಕ್ಕಳು ಬೇಡ' ಅಂತ ನಿರ್ಧರಿಸಿದಾಗಲೂ ಹೀಗೆ ಮಾಡಬಹುದು '

ಓದುತ್ತಾ, ಓದುತ್ತ ಬಲರಾಮ ತನಗೆ ತಾನೇ ಹೇಳಿಕೊಂಡ. 'ಅಥವಾ ತಮ್ಮದೇ ಜೀವಾಂಶ ಉಳಿಸಿ, ಬೆಳೆಸಿ, ಕಡೆಗೆ ಅಕ್ರಮ ವ್ಯವಹಾರಕ್ಕೆ ಹಚ್ಚುವ ಮೀರಾಳಂತಹ ಧೂರ್ತರೂ ಹೀಗೆ ಮಾಡುತ್ತಾರೆ.'

ಅವನಿಗೀಗ ಮೀರಾಳ ಕುಕೃತ್ಯದ ಬಗ್ಗೆ ಅನುಮಾನವೇ ಉಳಿಯಲಿಲ್ಲ. ಮನಸ್ಸು ಒಂಥರಾ ಉದಾಸವಾಗಿ ಹೋಯಿತು. ಬೇಜಾರಿನಲ್ಲಿಯೇ ಮತ್ತೊಮ್ಮೆ ಸಿಸಿಟಿವಿ ಫೂಟೇಜನ್ನು ತೆಗೆದ. ಚಿತ್ರ ನೋಡುತ್ತಾ ಕುಳಿತುಬಿಟ್ಟ. ಸುಮಾರು 450 ಕೋನದಲ್ಲಿ ಕ್ಯಾಮೆರಾದತ್ತ ತಲೆ ಎತ್ತಿರುವ ಶೇಖರನ ಎಡಗೆನ್ನೆಯ ಮೂಳೆ ಬಲಗೆನ್ನೆಯ ಮೂಳೆಗಿಂತ ಸುಮಾರು ಅರ್ಧ ಇಂಚಿನಷ್ಟು ಕೆಳಗಿದೆ. ಸೂಕ್ಷ್ಮವಾಗಿ ನೋಡಿದರೆ, ಎಸಗಲ್ಲ ತುಸು ಹೀಚಿದಂತೆಯೂ, ಬಲಗಲ್ಲ ತುಸು ಸಡಿಲಗೊಂಡಂತೆಯೂ ಕಾಣುತ್ತದೆ. ತಾನು ಮೀರಾಳ ಬಳಿಯಿಂದ ತೆಗೆದುಕೊಂಡ ಫೋಟೋಗೆ ಅದನ್ನು ಹಚ್ಚಿ ತಾಳೆ ಹಾಕಿದ. ಅದರಲ್ಲೋ ಶೇಖರ ಒಳ್ಳೆ ಸೀತಾ ದೇವತೆಯಂತೆ ಮಿನುಗುತ್ತಿದ್ದಾನೆ! ಮೂಗಿನ ಇಕ್ಕೆಲಗಳಲ್ಲೂ ಸಮಾಂತರವಾಗಿ ಎದ್ದು ನಿಂತ ಅಚ್ಚುಕಟ್ಟಾದ ಕೆನ್ನೆಮೂಳೆಗಳು! ಅಂದರೆ ಸಿಸಿಟಿವಿಯಲ್ಲಿ ಕಂಡದ್ದು ಶೇಖರ ಅಲ್ಲವೇ ಅಲ್ಲ!

ತಟ್ಟನೆ ಮತ್ತೆ ಡಾ. ವೈದ್ಯರಿಗೆ ಫೋನಾಯಿಸಿದ್ದ.

"ಹೌದು. ಹೀಗೆ ಭ್ರೂಣ ಸಂಸ್ಕರಣೆಯಿಂದ ಹುಟ್ಟುವ ಮಕ್ಕಳಲ್ಲಿ 30%ನಷ್ಟು ದೈಹಿಕ ನ್ಯೂನತೆಗಳು ಇರುವ ಚಾನ್ಸು ಜಾಸ್ತಿ." ಅಂತ ಉತ್ತರ ಬಂದಾಗ 'ಹುರ್ರಾ. ಯುರೇಕಾ." ಎಂದು ಕೂಗಿದ್ದ ಬಲರಾಮ.

ಮುಂದೆ ನಡೆದದ್ದೆಲ್ಲ ಬೆಂಗಳೂರಿನ ಕ್ರೈಂ ಹಿಸ್ಟರಿಯಲ್ಲಿ ದಂತಕಥೆ. ನೀವು ಕ್ರೋಂ ನಲ್ಲಿ 'ಮೋಸ್ಟ್ ಇಂಟರೆಸ್ಟಿಂಗ್ ಕೇಸಸ್ ಆಫ್ ಬ್ಯಾಂಕ್ ಥೆಫ್ಟ್ ಇನ್ ಇಂಡಿಯಾ." ಅಂತ ಒತ್ತಿದರೂ ಸರಿ, "ಮೀರಾ ತನ್ನ ಮತ್ತು ಪತಿ ವಿಜಯಕಾಂತರ ಫಲೀಕರಿಸಿದ ಭ್ರೂಣ ಎರಡಾಗಿ ವಿಭಜನೆಗೊಂಡಾಗ ಒಂದು ಭಾಗವನ್ನು ಹೇಗೆ ಸಂಸ್ಕರಿಸಿ ಬೆಳೆಸಿದಳು? ಶೇಖರನ ಅವಳಿ ರಾಹುಲನನ್ನು ಶೇಖರ ಹುಟ್ಟಿದ ಐದು ವರ್ಷಗಳ ನಂತರ ಹೇಗೆ ಪಡೆದಳು? ಮುಂದೆ ಇದೇ ಟ್ರಿಕ್ ಬಳಸಿ ಅಕ್ರಮ ದಂಧೆಗಳನ್ನು ರಾಹುಲನ ಕೈಯಿಂದ ಹೇಗೆ ಮಾಡಿಸಿದಳು? ಇದಕ್ಕೆಲ್ಲ ಅಡ್ಡ ಬಂದ ಶೇಖರನನ್ನು ಹೇಗೆ ಮನೆಯಿಂದ ಓಡಿಸಿದಳು? ಬ್ಯಾಂಕ್ ದರೋಡೆಯ ನಂತರ ರಾಹುಲನನ್ನು ಎಲ್ಲಿ ಬಚ್ಚಿಟ್ಟಿದ್ದಳು?" ಎಂಬೆಲ್ಲ ವಿವರಗಳು ಸಿಗುತ್ತವೆ.

ಜೈಲಿನಲ್ಲಿರುವ ರಾಹುಲ ಮತ್ತು ಮೀರಾರನ್ನು ನೋಡಲು ಬಲರಾಮ ಒಮ್ಮೊಮ್ಮೆ ಹೋಗುತ್ತಾನೆ. ಆಗೆಲ್ಲ ಅವನಿಗೆ "ನಿನ್ನ ಈ ದುಷ್ಟ ಭವಿಷ್ಯಾಲೋಚನೆಗೆ ಅಡ್ಡ ಬರಬಹುದೆಂದು ನೀನೇ ನಿನ್ನ ಪತಿ ವಿಜಯಕಾಂತನನ್ನು ಕೊಂದೆಯಲ್ಲವೆ?!" ಅಂತ ಮೀರಾಳನ್ನು ಕೇಳಬೇಕೆನ್ನಿಸುತ್ತದೆ. ಆದರೆ ಈಗ ಉತ್ತರ ಪಡೆಯಲು ತೀರ ತಡವಾಗಿದೆ ಎಂದರಿವಾದಾಗ ಬರಿದೇ ನಿಟ್ಟುಸಿರು ಬಿಟ್ಟು ಮರಳುತ್ತಾನೆ.

○

**ಸವಿತಾ ಕಟ್ಟಿ ಪುಣೆಯಲ್ಲಿ ಸಂಶೋಧನಾ ವಿದ್ಯಾರ್ಥಿ ಹಾಗೂ ಭರವಸೆಯ ವಿಜ್ಞಾನ ಕಥೆಗಾರ್ತಿ.**

# ಆಕಾಶ ನಕ್ಷೆ

## ಏಪ್ರಿಲ್ 2023

ಏಪ್ರಿಲ್ 2023 ತಿಂಗಳ ಖಗೋಳ ವಿದ್ಯಮಾನಗಳು:

### ಆಕಾಶನಕ್ಷೆ ಬಳಸುವ ವಿಧಾನ

ಆಗಸದತ್ತ ದೃಷ್ಟಿ ನೆಟ್ಟು, ನಿಮ್ಮ ಕಣ್ಣೆದುರು ನಕಾಶೆಯನ್ನು ಹಿಡಿಯಿರಿ. ನಕ್ಷೆಯಲ್ಲಿ ತೋರಿಸಿರುವ ದಿಕ್ಕುಗಳನ್ನು, ನಮ್ಮ ಭೂಮಿಯ ದಿಕ್ಕುಗಳಿಗೆ ಸರಿಹೊಂದಿಸಿ. ಈಗ ನಕ್ಷೆಯಲ್ಲಿ ತೋರಿಸಿರುವ ನಕ್ಷತ್ರಪುಂಜಗಳನ್ನು, ಗ್ರಹಗಳನ್ನು, ಹಾಗೂ ನಕ್ಷತ್ರಗಳನ್ನು ಆಗಸದಲ್ಲಿ ಗುರುತಿಸಲು ಪ್ರಯತ್ನಿಸಿ.

N
ಪೊಲಾರಿಸ್ -ಧ್ರುವ ನಕ್ಷತ್ರ
ಉರ್ಸಾ ಮೈನರ್
ಡ್ರಾಕೊ
ಕ್ಯಾಮೆಲೊಪರ್ಡಾಲಿಸ್
ಕ್ಯಾಪೆಲ್ಲಾ
ಆರಿಗಾ
ಮೈಜರ್
ಉರ್ಸಾ ಮೇಜರ್ -ಸಪ್ತರ್ಷಿ ಮಂಡಲ
ಹರ್ಕ್ಯುಲಸ್
ಕೊರೊನ ಬೋರಿಯಾಲಿಸ್
ಕ್ಯಾಸ್ಟರ್ -ನಕ್ಷತ್ರ
ಪೊಲಕ್ಸ್ -ನಕ್ಷತ್ರ
ಲಿಯೋ ಮೈನರ್
ಜೆಮಿನಿ -ಮಿಥುನ
ಬೋಟಿಸ್
ಕ್ಯಾನ್ಸರ್ -ಕರ್ಕ
ಆರ್ಕ್ಟುರಸ್ -ನಕ್ಷತ್ರ
ಲಿಯೋ -ಸಿಂಹ
E
W
ಒಫಿಯುಕಸ್
ರೆಗ್ಯೂಲಸ್ -ನಕ್ಷತ್ರ
ವರ್ಗೋ -ಕನ್ಯಾ
ಹೈಡ್ರಾ
ಲಿಬ್ರಾ -ತುಲಾ
ಸ್ಪೈಕಾ -ಚಿತ್ರ ನಕ್ಷತ್ರ
ಕ್ರೇಟರ್
ಸಿರಿಯಸ್ -ನಕ್ಷತ್ರ
ಕೊರ್ವಸ್
ಅಂಟರಿಸ್
ಕ್ಯಾನಿಸ್ ಮೇಜರ್
ಪಿಕ್ಸಿಸ್
ಸ್ಕೊರ್ಪಿಯಸ್
ಲ್ಯೂಪಸ್
ಸೆಂಟಾರಸ್
ಪಪ್ಪಿಸ್
ವೇಲಾ
ಗಾಕ್ರಕ್ಸ್
ಕ್ರಕ್ಸ್
ಎ ಕ್ರಕ್ಸ್
ಕ್ಯಾನ
ಮುಸ್ಕಾ
S

ಸ್ಥಳ : ಬೆಂಗಳೂರು, 13.00°N, 77.00°E
ಸಮಯ : 15 /04/2023, 22:30 (UTC +05:30)

ಈ ತಿಂಗಳ ಪ್ರಮುಖ ಖಗೋಳ ವಿದ್ಯಮಾನಗಳು ಇಂತಿವೆ.

**ಏಪ್ರಿಲ್ 6:** 'ಗುಲಾಬಿ ಚಂದ್ರ' ಎಂದೇ ಹೆಸರಾದ ಏಪ್ರಿಲ್ ತಿಂಗಳ ಪೂರ್ಣಚಂದ್ರ ಈ ದಿನ ಗೋಚರಿಸುತ್ತಾನೆ.

**ಏಪ್ರಿಲ್ 10–11:** ಈ ದಿನ ಪ್ರಕಾಶಮಾನವಾದ ಶುಕ್ರಗ್ರಹವು, ಸಪ್ತ ಸಹೋದರಿಯರೆಂದೇ ಖ್ಯಾತವಾದ 'ಪ್ಲೀಡಿಸ್' ಅಥವಾ 'ಕೃತ್ತಿಕಾ' ನಕ್ಷತ್ರಪುಂಜದ ಸಮೀಪದಲ್ಲಿರುತ್ತದೆ. ಬರಿಗಣ್ಣಿನಿಂದಲೇ ಈ ಖಗೋಳ ವಿದ್ಯಮಾನವನ್ನು ವೀಕ್ಷಿಸಬಹುದು.

**ಏಪ್ರಿಲ್ 11:** ಈ ದಿನ ಬುಧಗ್ರಹವು ಸಂಜೆಯಾಗಸದಲ್ಲಿ ಸೂರ್ಯನಿಂದ ಅತೀ ದೂರದಲ್ಲಿರುತ್ತದೆ. ಆದ್ದರಿಂದ ಈ ಸಮಯವು ಬುಧಗ್ರಹದ ವೀಕ್ಷಣೆಗೆ ಪ್ರಶಸ್ತವಾಗಿದೆ.

**ಏಪ್ರಿಲ್ 20:** ಈ ದಿನ ಅಮಾವಾಸ್ಯೆ.

**ಏಪ್ರಿಲ್ 20:** ಅಪರೂಪದ ವಿದ್ಯಮಾನ, 'ಹೈಬ್ರಿಡ್ ಸೂರ್ಯಗ್ರಹಣ' ಈ ದಿನ ಜರುಗಲಿದೆ. ಈ ಗ್ರಹಣವು ಆಗ್ನೇಯ ಏಷ್ಯಾ ಹಾಗೂ ಆಸ್ಟ್ರೇಲಿಯಾಗಳಲ್ಲಿ ಗೋಚರವಾಗಲಿದೆ.
ಹೈಬ್ರಿಡ್ ಸೂರ್ಯಗ್ರಹಣದ ದಿನ ಭೂಮಿಯ ವಿವಿಧ ಭಾಗಗಳಲ್ಲಿ ಕಂಕಣಾಕೃತಿ ಗ್ರಹಣ ಹಾಗೂ ಪೂರ್ಣ ಸೂರ್ಯಗ್ರಹಣಗಳೆರಡನ್ನೂ ನೋಡಬಹುದು. ಚಂದ್ರ ಹಾಗೂ ಭೂಮಿಯ ಚಲನೆಯಿಂದಾಗಿ ಇದು ಸಾಧ್ಯವಾಗುತ್ತದೆ. ಆದರೆ ಗಮನಿಸಿ, ಒಂದೇ ಸ್ಥಳದಿಂದ ಇವೆರಡನ್ನೂ ನೋಡಲು ಸಾಧ್ಯವಿಲ್ಲ. ಭಾರತದಲ್ಲಿ ಈ ಗ್ರಹಣ ಗೋಚರವಾಗುವುದಿಲ್ಲ.

**ಏಪ್ರಿಲ್ 22:** ಈ ತಿಂಗಳ 16ರಿಂದ 25ರವರೆಗೆ ಸಂಭವಿಸುವ ಲೈರಾ ನಕ್ಷತ್ರಪುಂಜದ ಪ್ರಖರ ನಕ್ಷತ್ರ 'ವೇಗಾ'ದ ಸಮೀಪದಿಂದ ಪ್ರಸರಣಗೊಂಡಂತೆ ಕಾಣುವ 'ಲೈರಿಡ್ ಉಲ್ಕಾವರ್ಷ' ಈ ದಿನ ಉಚ್ಛಮಟ್ಟದಲ್ಲಿರುತ್ತದೆ. 415.5 ವರ್ಷಗಳಿಗೊಮ್ಮೆ ಸೂರ್ಯನನ್ನು ಪರಿಭ್ರಮಿಸುವ ಸಿ/1861 ಜಿ1 ಥ್ಯಾಚರ್ ಅಥವಾ ಸರಳವಾಗಿ 'ಥ್ಯಾಚರ್' ಎಂದು ಕರೆಯಲ್ಪಡುವ ಧೂಮಕೇತುವಿನ ಉಳಿಕೆಗಳು ಕಾರಣ.

● ವೇಣುಗೋಪಾಲ ಗಾಂವಕರ್



(ವಿ. ಸೂ. : ಈ ಆಕಾಶ ನಕ್ಷೆಯನ್ನು ಡೌನ್ಲೋಡ್ ಮಾಡಿಕೊಂಡು ಉಪಯೋಗಿಸಲು, ಇದರೊಂದಿಗೆ ಕೊಟ್ಟಿರುವ ಅನ್ನು ಸ್ಕ್ಯಾನ್ ಮಾಡಿ. ರಾತ್ರಿಯಾಗಸವನ್ನು ವೀಕ್ಷಿಸುವಾಗ, ಬೆಳಕಿಗೆ, ಕೆಂಪು ಬಣ್ಣದ ದೀಪಗಳನ್ನು ಬಳಸುವುದು ಒಳ್ಳೆಯದು. ಈ ನಕ್ಷೆಯನ್ನು ಬೆಂಗಳೂರಿನ ಸ್ಥಾನಕ್ಕೆ ಅನುಗುಣವಾಗಿ ತಯಾರಿಸಿದ್ದರೂ, ಅತ್ಯಲ್ಪ ಬದಲಾವಣೆಗಳನ್ನು ಗಣನೆಗೆ ತೆಗೆದುಕೊಂಡು, ಬೇರೆ ಸ್ಥಾನಗಳಲ್ಲೂ ಬಳಸಬಹುದು.)

# ಬಂಧ

ರಚನೆ: ವಿದ್ಯಾ ಹಾಲಭಾವಿ

## ಕುತೂಹಲಿ–ವಿಜ್ಞಾನ ಪದಬಂಧ 8



**ಎಡದಿಂದ ಬಲಕ್ಕೆ**

2.ಲೆಕ್ಕಶಾಸ್ತ್ರವಿದು(3)

4.ಋತುಗಳ ರಾಜನ ತಿಂಗಳು(3)

6.ಅನಿಲಸ್ಥಿತಿಯಲ್ಲಿರುವ ಘಟಕಗಳು ದ್ರವವಾಗುವ ವಸ್ತುವಿನ ಸ್ಥಿತಿಯನ್ನು ಬದಲಾಯಿಸುವ ಪ್ರಕ್ರಿಯೆ ಅಥವಾ ಹೆಪ್ಪುಗಟ್ಟುವಿಕೆ(5)

7.ಬೆಳಕು ಹೆಚ್ಚು ನಯವಾಗಿರುವ ಮೇಲ್ಮೈ ಮೇಲೆ ಬಿದ್ದಾಗ ಪ್ರತಿಫಲಿಸುವ ಕ್ರಿಯೆ(5)

8.ಎಡದ ವಿರುದ್ಧ ಪದ ಉಲ್ಟಾ ಆಗಿದೆ(2)

10.ಹೂವಿಗೆ ಪರಾಗ ಸೇರಿಸುವಿಕೆ(5)

12.ವಿರಮಿಸುವಾಗ ಸೂರ್ಯ ಮೂಡಿದನಲ್ಲಾ!(2)

14.ಅಯಸ್ಕಾಂತವನ್ನು ಹೀಗೂ ಹೇಳುವರು(5)

20.ಬೆಳಕು ಒಂದು ಮಾಧ್ಯಮದಿಂದ ಇನ್ನೊಂದು ಮಾಧ್ಯಮಕ್ಕೆ ಓರೆಯಾಗಿ ಚಲಿಸುವಾಗ ಎರಡನೆಯ ಮಾಧ್ಯಮದಲ್ಲಿ ಪ್ರಸರಣ ದಿಕ್ಕು ಬದಲಾಗುವ ವಿದ್ಯಮಾನ(5)

21.ಕೊನೆಗೆ ಸೂತ್ರವನ್ನಿಟ್ಟರೆ ಇದು ಸಲೀಸು!(3)

22.ಲವ ಹಿಡಿದಿರುವ ಉಪ್ಪು(3)

**ಮೇಲಿಂದ ಕೆಳಕ್ಕೆ**

1.ಹೂವಿನಲ್ಲಿನ ಸಿಹಿರಸ(4)

2.ಗಣಿತವನ್ನು ಬಲ್ಲವನನು(3)

3.ತತಿಯಲ್ಲಿರುವ ವರ್ಗ!(4)

4.ಗಣಿತದಲ್ಲಿ ವರ್ಗಸಂಖ್ಯೆ ಬರಲು ಕಾರಣವಾದ ಮೂಲ ಸಂಖ್ಯೆ(4)

5.ತೂಕ ಮಾಡುವ ಸಾಧನ(3)

6.ಒಂದು ಸಂಖ್ಯೆಯನ್ನು ಪಡೆಯಲು ನಾವು ಸ್ವತಃ ಮೂರು ಬಾರಿ ಗುಣಿಸುವ ಅಂಶ(4)

7.ಪ್ರಾಯೋಗಿಕ ಅಧ್ಯಯನಕ್ಕಾಗಿ ಅಥವಾ ಪರೀಕ್ಷೆ ವಿಶ್ಲೇಷಣೆಗಾಗಿ ಸಜ್ಜುಗೊಂಡ ಸ್ಥಳ(5)

9.ಬಣ್ಣನೆಯಲ್ಲಿರುವ ರಂಗು(2)

11.ಉಪ್ಪಿನ ಗುಣವುಳ್ಳದ್ದು(2)

13.ಒಂದೇ ಘಟಕವನ್ನು ಎರಡು ಅಥವಾ ಹೆಚ್ಚಿನ ಭಾಗಗಳಾಗಿ ವಿಭಜಿಸುವುದು(4)

15.ಇಂಗ್ಲೀಷ್‌ನಲ್ಲಿ ರಿಟಾರ್ಟ್ ಎಂದು ಹೇಳುವ ಕೊಕ್ಕರೆ ಮೂತಿಯ ಆಕಾರದ ಯಂತ್ರ(4)

16.ರಾಕ್ ಆಯಿಲ್ ಅನ್ನು ಕನ್ನಡೀಕರಿಸಿ(4)

17.ಭಾರತದ ಪ್ರಸಿದ್ಧ ಗಣಿತಜ್ಞ ಮತ್ತು ಖಗೋಳಶಾಸ್ತ್ರಜ್ಞ(4)

18.ಇನ್ನೂ ಕರು ಹಾಕದೇ ಇರುವ ಹಸು(3)

19.ದ್ರವರೂಪದ ವಸ್ತು(3)



**ಕುತೂಹಲಿ–ವಿಜ್ಞಾನ ಪದಬಂಧ 7ರ ಉತ್ತರ**

## ಸಂಖ್ಯಾ ಬಂಧ–8



## ಸಂಖ್ಯಾ ಬಂಧ–7ರ ಉತ್ತರ



**ನಿಯಮ:** ಬಣ್ಣದ ಮನೆಯಲ್ಲಿ ನೀಡಲಾದ ಮೊತ್ತಕ್ಕೆ ಅನುಗುಣವಾಗಿ ಬರುವ ಅಂಕೆಗಳನ್ನು ಬಲಭಾಗ ಅಥವಾ ಕೆಳಭಾಗದಲ್ಲಿ ರುವ ಬಿಳಿಯ ಖಾಲಿಮನೆಗಳಲ್ಲಿ ಬರೆಯಬೇಕು. ಮೊತ್ತದ ಸಂಖ್ಯೆ ಬರಲು 1 ರಿಂದ 9 ವರೆಗಿನ ಅಂಕೆಗಳನ್ನು ಮಾತ್ರ ಬಳಸಬೇಕು. ಸೊನ್ನೆಯನ್ನು ಉಪಯೋಗಿಸುವಂತಿಲ್ಲ ಹಾಗು ಒಂದು ಮೊತ್ತದ ಸಂಖ್ಯೆ ಬರಲು ಬಳಸಿದ ಅಂಕೆಗಳು ಪುನರಾವರ್ತನೆಯಾಗುವಂತಿಲ್ಲ(ಅಂದರೆ 15 ಸಂಖ್ಯೆ ಬರಲು 6+3+6 ಎಂದು ಬರೆಯುವಂತಿಲ್ಲ).

# ಅಡ್ಯನಡ್ಕ ಕೃಷ್ಣ ಭಟ್ ಅವರ ಆಯ್ದ ಬರಹಗಳು

# ಭಾಷೆಯ ಹೊರಳುದಾರಿಯ ದಾಖಲೆ




● ಶಶಿಧರ ಡೋಂಗ್ರೆ

ನಮ್ಮ ಹಿಂದಿನ ತಲೆಮಾರಿನ ಸಾಹಿತ್ಯ ಕೃತಿಗಳನ್ನು ಓದುವುದು ತುಂಬ ಖುಷಿ ಕೊಡುವ ಸಂಗತಿ. ಈ ಓದಿನಲ್ಲಿ, ಕಳೆದ ಹೋದ ದಿನಗಳ ಬಗ್ಗೆ ಇರುವ ಆಪ್ತ ಭಾವವೂ ಸೇರಿದಂತೆ ಹಲವಾರು ಭಾವಗಳು ಬಂದು ಹೋಗುತ್ತವೆ. ಇಂಥದೇ ಒಂದು ಅನುಭವ ಈ ಪುಸ್ತಕವನ್ನು ಓದಿದಾಗಲೂ ಆಯಿತು. ಅಡ್ಯನಡ್ಕ ಕೃಷ್ಣಭಟ್ ಅವರು ಕನ್ನಡ ವಿಜ್ಞಾನ ಬರವಣಿಗೆಯಲ್ಲಿ ಪ್ರಾತಃ ಸ್ಮರಣೀಯರು; ತಮ್ಮ ಹದವಾದ ಮತ್ತು ಸಂಕೀರ್ಣತೆಯನ್ನು ಕಳೆದುಕೊಳ್ಳದೆ ಸರಳವಾಗಿ ನಿರೂಪಿಸುವ ಕಲೆಯನ್ನು ತಮ್ಮ ಬರವಣಿಗೆಯಲ್ಲಿ ಯಾವತ್ತೂ ಕಾಪಾಡಿಕೊಂಡು, ಈಗಿನ ತಲೆಮಾರಿಗೆ ಒಂದು ದಾರಿಗಂಬವಾದವರು. ಇಂಥವರು ಬರೆದಿರುವ ಹಲವು ದಶಕಗಳ ಸಾಹಿತ್ಯವನ್ನು ಕಲೆ ಹಾಕಿ, ಆಯ್ದು ಪ್ರಕಟಿಸುವುದೆಂದರೆ ಸಾಹಸವೇ ಸರಿ. ಇದನ್ನು ಟಿ. ಜಿ. ಶ್ರೀನಿಧಿ ಸಾಧಿಸಿದ್ದಾರೆ. ಕುತೂಹಲಿ ಪ್ರಕಟಿಸಿದೆ. ಇದಕ್ಕೆ ಅವರಿಗೆ ಅಭಿನಂದನೆಗಳು.

**ಭಾಷೆಯ ಪಲ್ಲಟ**

ಹಿಂದಿನ ಸಂಪಾದನೆಗಳನ್ನು ಓದುವಾಗ ವಿಷಯವಲ್ಲದೆ, ಭಾಷೆಯ ಬಳಕೆ ಮತ್ತು ಅದರ ಪಲ್ಲಟವೂ ನಮ್ಮ ಗಮನಕ್ಕೆ ಬಾರದೆ ಹೋಗುವುದಿಲ್ಲ. ಇದನ್ನು ಕೊಳ್ಳೇಗಾಲ ಶರ್ಮ ಅವರು ತಮ್ಮ ಮುನ್ನುಡಿಯಲ್ಲಿ ಗುರುತಿಸಿದ್ದಾರೆ. ಇದು ಪುಸ್ತಕದ ಹಲವು ಕಡೆ ನನ್ನ ಗಮನಕ್ಕೆ ಬಂದು, ನಲ್ವತ್ತು ಐವತ್ತು ವರ್ಷಗಳಲ್ಲಿ ಭಾಷೆ ತೆಗೆದುಕೊಳ್ಳುವ ಹೊರಳುದಾರಿಯ ಬಗ್ಗೆ ಕುತೂಹಲ ಮೂಡಿಸಿತು. ಗಗನಯುಗ ಲೇಖನದಲ್ಲಿ, 'ಇಂದು ಉಗಿಬಂಡಿಯಲ್ಲಿ ಪ್ರಯಾಣ ಮಾಡುವುದು ವಿಶೇಷವಾಗಿ ತೋರುವುದಿಲ್ಲ. ನಮ್ಮ 'ಸಮಾಜ ಬುದ್ಧಿ' ಈ ಬದಲಾವಣೆಗೆ ಒಗ್ಗಿಕೊಂಡಿರುವುದೇ ಕಾರಣ' ಎಂದಿದ್ದಾರೆ. ಇಲ್ಲಿ ಬಳಸಿರುವ 'ಸಮಾಜ ಬುದ್ಧಿ' ಎಂಬ ಪದವು ಇಂಗ್ಲಿಷಿನ **Socially Accepted** ಎನ್ನುವುದಕ್ಕೋ, **Socially Assimilated** ಎನ್ನುವುದಕ್ಕೋ ಪರ್ಯಾಯವಾಗಿದ್ದಿರಬಹುದು. ಆದರೆ ಸಾಮಾಜಿಕವಾಗಿ ಒಪ್ಪಿತವಾಗಿ, ಅದು 'ಸಮಾಜ ಬುದ್ಧಿ' ಯಾಗಿ ತೋರುವುದು ಮತ್ತು ಅದನ್ನು ಬಳಸಿದ ರೀತಿ ತುಂಬ ಆಪ್ಯಾಯಮಾನವಾಗಿ ಕಂಡಿತು. ತಮ್ಮ ಲೇಖನಗಳಲ್ಲಿ **infrared**ನ್ನು ಸೂಚಿಸಲು 'ಅವಗೆಂಪು' ಎಂಬ ಪದವನ್ನು ಬಳಸಿದ್ದಾರೆ. **Infrared** ಪದದ ಮೂಲ ವ್ಯುತ್ಪತ್ತಿಯನ್ನು ಗಮನಿಸಿದಾಗ ಅವಗೆಂಪು ಕೂಡ ಸರಿಯೆನಿಸಿತು. ನನ್ನ ಹತ್ತಿರ ಇರುವ ಕೆಲವು ಡಿಕ್ಷನರಿಗಳನ್ನು ನೋಡಿದಾಗ ಅವೆಲ್ಲವೂ ಅವಗೆಂಪು ಪದವನ್ನೇ ಬಳಸುವುದು ಕಂಡಿತು. ಆದರೆ ಇಂದು ಅವಗೆಂಪು ಪದವನ್ನು ಯಾರೂ ಉಪಯೋಗಿಸುತ್ತಿರುವ ಹಾಗೆ ಕಾಣುವುದಿಲ್ಲ ಬದಲಾಗಿ ಅತಿಗೆಂಪು ಎಂದು ಪದಬಳಕೆಯನ್ನು ಸಾಮಾನ್ಯವಾಗಿ ಕಾಣುತ್ತೇವೆ. ಹಾಗಾದರೆ ಈ ಪಲ್ಲಟ ಯಾವಾಗ, ಹೇಗೆ ಮತ್ತು ಯಾಕೆ ಆಯಿತು? ವಿಜ್ಞಾನ ಸಾಹಿತ್ಯವನ್ನೂ ಸೇರಿಸಿಕೊಂಡು ಕನ್ನಡ ಸಾಹಿತ್ಯದ ಸಂದರ್ಭದಲ್ಲಿ, 'ಅತಿ' ಎನ್ನುವ ಪದದ ಬಳಕೆ 'ಅವ' ಕ್ಕಿಂತ ಹೆಚ್ಚು ಎಂತಲೇ?

ಉಪಜ್ಞೆ ಎಂಬ ಪದವನ್ನು ಅವರು ಬಳಸುತ್ತಾರೆ. ಉಪಜ್ಞೆ ಎಂದರೆ ಮನುಷ್ಯ ತನ್ನ ತಿಳಿವಳಿಕೆಯಿಂದ ಪಡೆದ ಜ್ಞಾನ ಮತ್ತು ಇಂಥದು ಯಾವುದೇ ಸಂಪ್ರದಾಯದಿಂದ ಬಂದದ್ದಲ್ಲ ಎನ್ನುವುದನ್ನು ಸೂಚಿಸುವ ಪದ. 2016 ರ ಅವರ ಒಂದು ಲೇಖನದಲ್ಲಿ

**ಇದು ಪುಸ್ತಕದ ಹಲವು ಕಡೆ ನನ್ನ ಗಮನಕ್ಕೆ ಬಂದು, ನಲ್ವತ್ತು ಐವತ್ತು ವರ್ಷಗಳಲ್ಲಿ ಭಾಷೆ ತೆಗೆದುಕೊಳ್ಳುವ ಹೊರಳುದಾರಿಯ ಬಗ್ಗೆ ಕುತೂಹಲ ಮೂಡಿಸಿತು. ಗಗನಯುಗ ಲೇಖನದಲ್ಲಿ, 'ಇಂದು ಉಗಿಬಂಡಿಯಲ್ಲಿ ಪ್ರಯಾಣ ಮಾಡುವುದು ವಿಶೇಷವಾಗಿ ತೋರುವುದಿಲ್ಲ. ನಮ್ಮ 'ಸಮಾಜ ಬುದ್ಧಿ' ಈ ಬದಲಾವಣೆಗೆ ಒಗ್ಗಿಕೊಂಡಿರುವುದೇ ಕಾರಣ' ಎಂದಿದ್ದಾರೆ.**

**ಭಾಷೆ, ಬರವಣಿಗೆ ಮತ್ತು ಸಂಪಾದನೆ ಕುರಿತ ಒಂದು ವಿಭಾಗದಲ್ಲಿ 'ಇಂಗ್ಲಿಷಿನ ಸೋಂಕು' ಎಂಬ ವಿಶೇಷ ಪದಗುಚ್ಛ ಬಳಸಿದ್ದಾರೆ. ವಿಜ್ಞಾನ ಲೇಖನಗಳನ್ನು ಬರೆಯುವವರಿಗೆ 'ಇಂಗ್ಲಿಷಿನ ಬಂಧದಿಂದ ಬಿಡಿಸಿಕೊಂಡು, ಕನ್ನಡದ ಜಾಯಮಾನಕ್ಕೆ ಹೊಂದಿಕೊಳ್ಳುವ ಪದ, ವಾಕ್ಯ ರಚನೆಯ ಕಷ್ಟಗಳು ತಿಳಿದಿರುತ್ತವೆ. ಈ ಸಂಕಷ್ಟವನ್ನು ಸೂಚಿಸಲು ಈ ಪದಗುಚ್ಛವನ್ನು ಬಳಸಿದ್ದಾರೆ ಮತ್ತು ಆ ಸೋಂಕನ್ನು ನಿವಾರಿಸಬಹುದಾದ ಉಪಾಯಗಳ ಬಗ್ಗೆ ಸಲಹೆಯನ್ನು ಕೊಟ್ಟಿದ್ದಾರೆ**

ಕಾಣುವ ಈ ಪದವನ್ನು ಇತರರು ಬಳಸಿದ್ದನ್ನು (ನನ್ನ ಸೀಮಿತ ಓದಿನಲ್ಲಿ) ಕಂಡಿಲ್ಲ. ಆದರೆ, ಮನುಷ್ಯ ವೈಚಾರಿಕತೆಯಿಂದ ಕಂಡುಕೊಂಡ ವಿಷಯಗಳನ್ನು ಸೂಚಿಸಬಲ್ಲ ಒಳ್ಳೆಯ ಪದ ಎನ್ನಿಸಿತು. ಇದೇ ಲೇಖನದಲ್ಲಿ ಅವರು ಒಡ್ಡವಣೆ ಎಂಬ ಪದವನ್ನೂ ಬಳಸುತ್ತಾರೆ. ಬ್ರಾಕೆಟ್ ನಲ್ಲಿರುವ ಅಟಕಾಮ ಲಾರ್ಜ್ ಮಿಲಿಮೀಟರ್ ಅರೇ  ಒಂದು ಸಣ್ಣ ಸೂಚನೆಯನ್ನು ಕೊಟ್ಟಿತು. 'ಅರೇ ಎಂಬ ಪದದ ಸಮಾನಾರ್ಥವಾಗಿ ಬಹುಶಃ 'ವಸ್ತುಗಳ ಸಮೂಹ' ಎಂಬ ಅರ್ಥವನ್ನು ಸೂಚಿಸುವ ಒಡ್ಡವಣೆ ಎಂಬ ಪದವನ್ನು ಬಳಸಿರಬಹುದು. ಆದರೆ ಇದನ್ನು ಅರಿಯಲು ಸ್ವಲ್ಪ ಸರ್ಕಸ್ ಮಾಡಬೇಕಾಯಿತು ಎನ್ನುವುದೂ ನಿಜ.

ಖುಷಿ ಕೊಡುವ ಇನ್ನೊಂದು ಪದ ಋಣಾಘಾತ. ಒಂದು ಸಂಖ್ಯೆಯ ಘಾತ ಸೂಚಿಸುವುದು ಹೇಗೆ? 10–2 10–3.

ಮುಂತಾದ ಸಂಖ್ಯೆಗಳನ್ನು ವಿವರಿಸುತ್ತಾ 'ಋಣಾಘಾತ' ಎಂಬ ಪದವನ್ನು ಬಳಸುತ್ತಾರೆ. ಇದೇ ಲೇಖನದಲ್ಲಿ ಹಿಗ್ಗಿಸುವುದನ್ನು ಸೂಚಿಸಲು ವ್ಯಾಕೋಚನ ಎಂಬ ಪದವನ್ನು ಬಳಸುತ್ತಾರೆ. ಮೂವತ್ತು–ನಲವತ್ತು ವರ್ಷಗಳ ಹಿಂದೆ, ವೈಜ್ಞಾನಿಕ ಪದಗಳಿಗೆ ಸಂಸ್ಕೃತ ಮೂಲದ ಪದಗಳನ್ನು ಟಂಕಿಸುವ ಸಂಪ್ರದಾಯ/ರೂಢಿ ಇತ್ತು. ಇದು ಬಹುಶಃ ಅದರ ಪಳೆಯುಳಿಕೆ ಇರಬಹುದು. ಅವರು ಹಿಗ್ಗುವಿಕೆ ಎಂದೇ ಬಳಸಿದ್ದರೆ ಸಾಕಿತ್ತು ಎಂದು ಇಂದಿನ ಓದುಗರಿಗೆ ಅನಿಸುವುದು ಸಹಜ.

ಭಾಷೆ, ಬರವಣಿಗೆ ಮತ್ತು ಸಂಪಾದನೆ ಕುರಿತ ಒಂದು ವಿಭಾಗದಲ್ಲಿ 'ಇಂಗ್ಲಿಷಿನ ಸೋಂಕು' ಎಂಬ ವಿಶೇಷ ಪದಗುಚ್ಛ ಬಳಸಿದ್ದಾರೆ. ವಿಜ್ಞಾನ ಲೇಖನಗಳನ್ನು ಬರೆಯುವವರಿಗೆ 'ಇಂಗ್ಲಿಷಿನ ಬಂಧದಿಂದ ಬಿಡಿಸಿಕೊಂಡು, ಕನ್ನಡದ ಜಾಯಮಾನಕ್ಕೆ ಹೊಂದಿಕೊಳ್ಳುವ ಪದ, ವಾಕ್ಯ ರಚನೆಯ ಕಷ್ಟಗಳು ತಿಳಿದಿರುತ್ತವೆ. ಈ ಸಂಕಷ್ಟವನ್ನು ಸೂಚಿಸಲು ಈ ಪದಗುಚ್ಛವನ್ನು ಬಳಸಿದ್ದಾರೆ ಮತ್ತು ಆ ಸೋಂಕನ್ನು ನಿವಾರಿಸಬಹುದಾದ ಉಪಾಯಗಳ ಬಗ್ಗೆ ಸಲಹೆಯನ್ನು ಕೊಟ್ಟಿದ್ದಾರೆ.

ಇನ್ನೊಂದು ಭಾಗದಲ್ಲಿ ಪದವನ್ನು ಅನಗತ್ಯವಾಗಿ ವಿಸ್ತರಿಸುವ ಗೀಳನ್ನು ಕುರಿತು 'ಬಡಾವಣೆ' ಎಂಬ ಪದವನ್ನು ಬಳಸಿದ್ದಾರೆ. ಇಂದು ರೂಢಿಯಲ್ಲಿ, ನಗರದ ಒಂದು ಭಾಗ ಎಂದೇ ಎಲ್ಲರಿಗೂ ಪರಿಚಿತವಾಗಿರುವ ಈ ಪದದ ಇನ್ನೊಂದು ಅರ್ಥ, 'ಪದ/ವಾಕ್ಯವನ್ನು ವಿಸ್ತರಿಸುವ ರೀತಿ' ಎಂದೂ ಇತ್ತು

**ಭಾಷೆ, ಬರವಣಿಗೆ ಮತ್ತು ಸಂಪಾದನೆ ಕುರಿತ ಒಂದು ವಿಭಾಗದಲ್ಲಿ 'ಇಂಗ್ಲಿಷಿನ ಸೋಂಕು' ಎಂಬ ವಿಶೇಷ ಪದಗುಚ್ಛ ಬಳಸಿದ್ದಾರೆ. ವಿಜ್ಞಾನ ಲೇಖನಗಳನ್ನು ಬರೆಯುವವರಿಗೆ 'ಇಂಗ್ಲಿಷಿನ ಬಂಧದಿಂದ ಬಿಡಿಸಿಕೊಂಡು, ಕನ್ನಡದ ಜಾಯಮಾನಕ್ಕೆ ಹೊಂದಿಕೊಳ್ಳುವ ಪದ, ವಾಕ್ಯ ರಚನೆಯ ಕಷ್ಟಗಳು ತಿಳಿದಿರುತ್ತವೆ. ಈ ಸಂಕಷ್ಟವನ್ನು ಸೂಚಿಸಲು ಈ ಪದಗುಚ್ಛವನ್ನು ಬಳಸಿದ್ದಾರೆ ಮತ್ತು ಆ ಸೋಂಕನ್ನು ನಿವಾರಿಸಬಹುದಾದ ಉಪಾಯಗಳ ಬಗ್ಗೆ ಸಲಹೆಯನ್ನು ಕೊಟ್ಟಿದ್ದಾರೆ.**

ಎಂದು ತಿಳಿಯಿತು. ಇದು ನನ್ನ ಸೀಮಿತ ತಿಳಿವಿನ ಕಾರಣವೂ ಇರಬಹುದಾದರೂ, ಸರಾಗ ಓದಿಗೆ ತೊಡಕಾಯಿತು ಎನ್ನುವುದೂ ಸತ್ಯ.

ಅನುಮಾನಗಳನ್ನು ವ್ಯಕ್ತಪಡಿಸುವ ರೀತಿ

ಈ ಪುಸ್ತಕದಲ್ಲಿ ಕುತೂಹಲಿಕಾರಿಯಾಗಿ ಕಂಡಿದ್ದು, ಯಾವುದನ್ನೂ ಇದಮಿತ್ಥಂ ಎಂದು ಘಂಟಾಘೋಷವಾಗಿ ಸಾರುವ ಪ್ರವೃತ್ತಿಯನ್ನು ತಮಗೆ ತಾವೇ ಹೇಗೆ ಹತೋಟಿಯಲ್ಲಿಟ್ಟುಕೊಂಡಿದ್ದರು ಎನ್ನುವುದನ್ನು ತೋರುವ ಭಾಗಗಳು. 'ಇಂದಿನ ಕಿಲೋಗ್ರಾಮ್ ಸ್ಥಿರವಲ್ಲ' ಎಂಬ ಲೇಖನದ ಕೊನೆಯಲ್ಲಿ ಅವರು ಹೇಳುವ ಮಾತು ಇದನ್ನು ಧ್ವನಿಸುತ್ತದೆ. 'ಸದ್ಯದ ನಮ್ಮ ತಿಳಿವಿನಲ್ಲಿ ಪ್ಲಾಂಕ್ ಸ್ಥಿರಾಂಕ ಎಂದಿಗೂ ಎಲ್ಲೂ ಬದಲಾಗುವುದಿಲ್ಲ'. ಪ್ಲಾಂಕ್ ಸ್ಥಿರಾಂಕ ಇತ್ತೀಚಿನ ಫಿಸಿಕ್ಸ್ ಅಧ್ಯಯನದಲ್ಲಿ ಎಂತಹ ಸ್ಥಿರತೆ ಪಡೆದುಕೊಂಡಿದೆ ಎನ್ನುವುದು ಎಲ್ಲರಿಗೂ ತಿಳಿದಿದೆ. ಆದರೂ, ಅವರು 'ಸದ್ಯದ ನಮ್ಮ ತಿಳಿವಿನಲ್ಲಿ ' ಎಂದು ಹೇಳುವ ಮೂಲಕ, ಮುಂದೆ ಇದೂ ಅಸ್ಥಿರವಾಗಬಹುದು ಎನ್ನುವ ಸೂಚನೆಯನ್ನು ಕೊಡುತ್ತಾರೆ. ಇದರ ಬಗ್ಗೆ ಕೆಲವು ಸಂಶೋಧನಾ ಲೇಖನಗಳೂ ಪ್ರಕಟವಾಗಿವೆ.

**ಉಲ್ಲೇಖಪಡಿಸಬಹುದಾದಂತಹ ವಾಕ್ಯಗಳು**

ಅಡ್ಯನಡ್ಕ ಅವರ ಬರಹಗಳಲ್ಲಿ ಮತ್ತೆ ಮತ್ತೆ ಉಲ್ಲೇಖಿಸಬಹುದಾದ ವಾಕ್ಯ ಪುಂಜಗಳಿರುವುದು ಸಹಜವೇ. ಇಂಥವುಗಳಲ್ಲಿ ನನ್ನ ಗಮನಕ್ಕೆ ಬಂದ ಕೆಲವು.

ಗಗನ ಯುಗ – ನಮಗೆ ಅಸಾಮಾನ್ಯವಾದುದು ಮುಂದಿನ ಪೀಳಿಗೆಗೆ ಸಾಮಾನ್ಯವಾಗುವ ಲಕ್ಷಣವಿದು ತಾನೇ?

ಫಿಸಿಕ್ಸ್ ಎಂದರೆ ಪ್ರಕೃತಿ ದರ್ಶನ  ಹೀಗೆ ಪ್ರಕೃತಿಯ ಸ್ಥೂಲವಾದ, ಸೂಕ್ಷ್ಮವಾದ ಹಾಗೂ ಸಂಕೀರ್ಣವಾದ ಎಲ್ಲ ಮುಖಗಳನ್ನು ಪರಿಚಯಿಸುತ್ತ ನಮಗೆ ಎದುರಾಗುವ ಅನಂತ ವೈವಿಧ್ಯವನ್ನು ಕೆಲವೇ ಕೆಲವು ಮೂಲ ಪರಿಕಲ್ಪನೆಗಳಿಂದ ತಿಳಿಯುವುದೇ ಪ್ರಕೃತಿ ದರ್ಶನ.

**ಶೀರ್ಷಿಕೆಗಳು**

ಕನ್ನಡ ಭಾಷೆಯ ಮೇಲಿನ ಅವರ ಹಿಡಿತವನ್ನು ನಮಗೆ ಕಾಣಿಸುವ ಮತ್ತು ತಮ್ಮ ಲೇಖನಗಳನ್ನು ಕಾವ್ಯಮಯವಾಗಿಸುವ ನಿಟ್ಟಿನಲ್ಲಿ ಅವರು ಬಳಸಿರುವ ಶೀರ್ಷಿಕೆಗಳು ಕುತೂಹಲಕರಿಯಾಗಿದೆ. 'ಆಕಾಶದಲ್ಲಿ ತೇಲಿ ಹೋದ ಅಜ್ಜನ ಗಡ್ಡ' ಮತ್ತು 'ಎಲ್ಲಿ ಹೋಗುವಿರಿ ....ನಿಲ್ಲಿ ಕೀಟಗಳೇ'. ಇವು ಇದರ ನಿದರ್ಶನಗಳು. ಮೊದಲನೆಯದು ತಾವು ಬಾಲ್ಯದಲ್ಲಿ ಉಪಯೋಗಿಸುತ್ತಿದ್ದ ಉಪಮೆಯ ಸುತ್ತ ಹೆಣೆದಿದ್ದರೆ, ಎರಡನೆಯದು ಕನ್ನಡದ ಜನಪ್ರಿಯ ಭಾವಗೀತೆಗಳಲ್ಲಿ ಒಂದಾದ 'ಎಲ್ಲಿ ಹೋಗುವಿರಿ, ನಿಲ್ಲಿ ಮೋಡಗಳೇ' ಯನ್ನು ಆಧಾರವಾಗಿಟ್ಟುಕೊಂಡಿರುವುದು ನಿಚ್ಚಳವಾಗಿ ಕಾಣುತ್ತದೆ. ಶೀರ್ಷಿಕೆಗಳಲ್ಲದೆ, ಕಥೆ, ಕಾದಂಬರಿಯಲ್ಲಿಯೂ ಸಲ್ಲಬಹುದಾದ ಹಲವು ವಾಕ್ಯಗಳನ್ನು ಅವರ ಅನೇಕ ಲೇಖನಗಳಲ್ಲಿ ಕಾಣಬಹುದು. 'ಕವಿ ಮನಸ್ಸು' ಇಲ್ಲದಿದ್ದರೆ, ಇದು ಸಾಧ್ಯವಾಗುತ್ತಿರಲಿಲ್ಲ.

ಕೊನೆಯದಾಗಿ, ಇಷ್ಟೆಲ್ಲ ವಿಜ್ಞಾನ ಲೇಖನಗಳ ಮಧ್ಯೆ 'ಅಂಚೆ ವಿಐಪಿ' ಎಂಬ ಸಣ್ಣ ಲೇಖನವೂ ಇದೆ. ಆಗ ತಾನೇ ಮುದ್ರಣಗೊಂಡ ಪುಸ್ತಕ ಸೂಸುವ ಪರಿಮಳ, ವಿಐಪಿ ಪೋಸ್ಟ್ ನಿಂದ ಅದನ್ನು ಪಡೆಯುವಾಗ ಸಿಗುವ ಖುಷಿ ಮತ್ತು ಅಂಚೆ ವಿತರಿಸುವ ಸಂಸ್ಥೆಯಲ್ಲಿ ಕೆಲಸ ಮಾಡುವವರ ಜೊತೆಗಿನ ಬಾಂಧವ್ಯವನ್ನು ನವಿರಾಗಿ ವ್ಯಕ್ತಪಡಿಸುವ ಈ ಭಾಗ, ನಮ್ಮನ್ನೂ ಅಂದಿನ ಲೋಕಕ್ಕೆ ಕರೆದುಕೊಂಡು ಹೋಗುತ್ತದೆ. ಈಗಲೂ ಅಮೆಝಾನ್ ಮೂಲಕವೋ, ಬೇರೆ ಕೊರಿಯರ್ ಮೂಲಕವೋ ಬಂದ ಪುಸ್ತಕಗಳು ತರುವ ಸಂತೋಷ ಇದಕ್ಕಿಂತ ಕಡಿಮೆಯದ್ದಲ್ಲ. ಆದರೆ ಅಂಚೆಯಣ್ಣ ಮಾತ್ರ ಇಂದು ನಾಪತ್ತೆ.

○

**ಶಶಿಧರ ಡೋಂಗ್ರೆ ವೃತ್ತಿಯಿಂದ ಮಾಹಿತಿ ತಂತ್ರಜ್ಞಾನಿ. ಪ್ರವೃತ್ತಿಯಿಂದ ವಿಜ್ಞಾನ ನಾಟಕಕರ್ತೃ, ವಿಮರ್ಶಕರು.**

